॥ ಶ್ರೀ ಜಗದ್ಗುರು ಪಂಚಾಚಾರ್ಯೇಭ್ಯೋ ನಮಃ ॥



ಸರಸ್ವತಿ ನಮಸ್ತುಭ್ಯಂ ವರದೇ ಕಾಮರೂಪಿಣಿ।
ವಿದ್ಯಾರಂಭಂ ಕರಿಷ್ಯಾಮಿ ಸಿದ್ಧಿರ್ಭವತು ಮೇ ಸದಾ ॥

# ಸ್ತ್ರೀ-ಧರ್ಮ —



ಲೇಖಕರು ಮತ್ತು ಪ್ರಕಾಶಕರು;
ಶ್ರೀ. ಮುರುಗೇಂದ್ರ ಶಿವಾಚಾರ್ಯಸ್ವಾಮಿಗಳು
ಕೊಣ್ಣೂರು ಹಿರೇಮಠ

ಬೆಲೆ ೧ ರೂಪಾಯಿ



ವಿಶ್ವನಾಥಗ್ರಂಥಮಾಲಾ

ತೃತೀಯ ಪುಷ್ಪ—೩

---

# — ಸ್ತ್ರೀ-ಧರ್ಮ —




ಲೇಖಕರು ಮತ್ತು ಪ್ರಕಾಶಕರು

ಶ್ರೀ|| ಷ|| ಬ್ರ|| ಮುರುಗೇಂದ್ರ ಶಿವಾಚಾರ್ಯಸ್ವಾಮಿಗಳು

ಕೊಣ್ಣೂರ ಹಿರೇಮಠ



1957

ಮುದ್ರಕರು : ಚಿಕ್ಕವೀರೇಶ್ವರ ಪ್ರಿಂಟಿಂಗ ಪ್ರೆಸ್, ನರಗುಂದ.

ಬೆಲೆ : ೧ ರೂಪಾಯಿ

# ಪ್ರಸ್ತಾವನೆ

ಯಾವುದಾದರೊಂದು ರಾಷ್ಟ್ರವು ಉನ್ನತ ಶಿಖರವನ್ನೇರಬೇಕಾದರೆ ಆ ರಾಷ್ಟ್ರದೊಳಗಿನ ಸ್ತ್ರೀ-ಪುರುಷರು ನೀತಿವಂತರಾಗಲೇಬೇಕು. ನೀತಿ-ವಂತರಾಗದವಿನಾ ಆ ರಾಷ್ಟ್ರವು ಉಚ್ಛ್ರತೆಯನ್ನು ಹೊಂದಲಾರದು. ಸ್ತ್ರೀ-ಪುರುಷರಲ್ಲಿ ಪುರುಷರಿಗಿಂತಲೂ ಮುಕ್ಕಾಲು ಭಾಗ ಸ್ತ್ರೀಯರಿಂದಲೇ ರಾಷ್ಟ್ರವು ಏಳಿಗೆ ಹೊಂದಬಹುದೆಂದು ಹೇಳಬಹುದಾಗಿದೆ. ಏಕೆಂದರೆ ಚಿಕ್ಕ ಬಾಲ ಬಾಲಿಕೆಯರು ಹೆಚ್ಚಾಗಿ ತಂದೆಗಿಂತ ತಾಯಿಯಲ್ಲಿಯೇ ಬೆಳೆದು ದೊಡ್ಡವರಾಗಬೇಕಾದುದರಿಂದ ಆಕೆಯ 'ನಡೆ-ನುಡಿಗಳೂ, ಆಚಾರ-ವಿಚಾರಗಳೂ ಆ ಬಾಲ-ಬಾಲಕೆಯರಲ್ಲಿ ವಿಶೇಷ ಒಡಮೂಡುವವು. ಎಳೆಯದಾದ ಬಿಧರನ್ನು ಬೇಕಾದತ್ತ ಮಣಿಸಿ ಬೇಕಾದದ್ದನ್ನು ಮಾಡಿಕೊಳ್ಳುವಂತೆಯೂ ಚನ್ನಾಗಿ ಕಾದ ಕಬ್ಬಿಣವನ್ನು ಸುತ್ತಿಗೆಯಿಂದ ಹೊಡೆದು ಬೇಕಾದದ್ದನ್ನು ಮಾಡಿ ಕೊಳ್ಳುವಂತೆಯೂ ಚಿಕ್ಕ ಬಾಲ-ಬಾಲಿಕೆಯರ ಮೃದುವಾದ ಎಳೆಯ ಮನಸ್ಸನ್ನು ಮಠದೊಳಗಿನ ಗಿಳಿಯಂತೆ ಸನ್ಮಾರ್ಗಕ್ಕಾಗಲಿ, ಕಟುಕರ ಮನೆಯೊಳಗಿನ ಗಿಳಿಯಂತೆ ದುರ್ಮಾರ್ಗಕ್ಕಾಗಲಿ ಹಚ್ಚಬಹುದು. ಒಟ್ಟಿನ ಮೇಲೆ ಸ್ತ್ರೀಯರೇ ಆರಂಭದ ಶಿಕ್ಷಕೆಯರಾಗಿದ್ದಾರೆಂದು ಹೇಳಲಿಕ್ಕೆ ಯಾವ ಅಭ್ಯಂತರವೂ ಇಲ್ಲ.

'ಸಂಸರ್ಗಜಾ ದೋಷ ಗುಣಾಭವಂತಿ' ಎಂಬ ಆಪ್ತೋಕ್ತಿಯಂತೆ ಪೂರ್ವದಿಂದ ಬಂದ ತಾಯಿಯ ಗುಣದೋಷಗಳೇ ಮಕ್ಕಳಲ್ಲಿ ಹುಟ್ಟುವದು ಸ್ವಾಭವಿಕ. ಮತ್ತು ಮೂರು ವರುಷದ ಬುದ್ಧಿ ನೂರು ವರ್ಷಗಳವರೆಗೆ ಎಂಬ ಗಾದೆಯು ಸುಳ್ಳಲ್ಲವೆಂದು ಆಧುನಿಕ ಮಾನಸ ಶಾಸ್ತ್ರದ ಸಂಶೋಧಕರು ಕಂಡು ಹಿಡಿದಿದ್ದಾರೆ. ಆದ್ದರಿಂದ ಸ್ತ್ರೀಯರ ಸುಧಾರಣೆಯು ಮುಖ್ಯವಾಗಿದೆ. ಮತ್ತು ಈ ತತ್ತ್ವವನ್ನು ತಿಳಿದ ಕೆಲವು ಮಹಾಶಯರು ಸ್ತ್ರೀಯರ ಸುಧಾರಣೆಯ ಬಗ್ಗೆ ಒಂದು ಪುಟ್ಟ ಹೊತ್ತಿಗೆಯನ್ನು ಬರೆಯಬೇಕೆಂದು ನಮಗೆ ಸೂಚಿಸಿದ ಮೇರೆಗೆ ಅವರ ಅಪೇಕ್ಷಾನುಸಾರ ನಮ್ಮ ಅಲ್ಪ ಮತಿಗೆ ತಿಳಿದ-ಮಟ್ಟಿಗೆ ಕೆಲವು ಉಪಯುಕ್ತ ವಿಷಯಗಳನ್ನು ಸಂಗ್ರಹಿಸಿ 'ಸ್ತ್ರೀ-ಧರ್ಮ' ಎಂಬ ಹೆಸರಿನಿಂದ ಪ್ರಕಟಿಸಲ್ಪಟ್ಟಿರುವುದು

ಶ್ರೀಶೈಲ ಜಗದ್ಗುರು ಶ್ರೀ ೧೦೦೮ ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರು ಈ ಗ್ರಂಥವನ್ನು ಪರಿಶೋಧಿಸಿ ಶುಭಾಶೀರ್ವಾದಪೂರ್ವಕ ತಮ್ಮ ಶುಭ ಸಂದೇಶವನ್ನುದಯಪಾಲಿಸಿದ್ದಾರೆ.

ರೌಡಕುಂದಿ ಬೃಹನ್ಮಠದ ಚರಪಟ್ಟಾಧ್ಯಕ್ಷರಾದ ಷ|| ಬ್ರ|| ಪಂ|| **ಶ್ರೀ ಸಿದ್ಧರಾಮ ಶಿವಾಚಾರ್ಯರೂ** ಪರಿಶೋಧಿಸಿ ಮುನ್ನುಡಿಯನ್ನು ಬರೆದು ಕಳುಹಿಸಿದ್ದಾರೆ. ಅವರಿಗೆಲ್ಲ ನಮ್ಮ ಅನಂತ ವಂದನೆಗಳು.

ಮುಷ್ಟಿನ ಕಡೆಗೆ ದೃಷ್ಟಿಕೊಡದೆ ಧರ್ಮದ ಕಡೆಗೆ ಲಕ್ಷ್ಯಗೊಟ್ಟು ಪ್ರತಿಯೊಂದು ಜಾತಿಯ ಸ್ತ್ರೀಯರು ದಯವಿಟ್ಟು ಈ ಪುಸ್ತಕವನ್ನು ತರಿಸಿಕೊಂಡು ಇದರಲ್ಲಿಯ ಅಮೂಲ್ಯ ವಿಷಯಗಳನ್ನು ತಿಳಿದುಕೊಂಡು ಅದರಂತೆ ನಡೆದು ಶ್ರೇಷ್ಠವಾದ ನರಜನ್ಮವನ್ನು ಉದ್ಧರಿಸಿಕೊಳ್ಳುವುದಲ್ಲದೆ ಮಾಂಗಲ್ಯಾದಿ ದೇವತೆಯಾದ ಪಾರ್ವತಿದೇವಿಯ ಕೃಪೆಗೆ ಪಾತ್ರರಾಗಬೇಕು.

ಈ ಗ್ರಂಥದ ಪ್ರಿಂಟಿಗೆ ಉದಾರ ಹಸ್ತದಿಂದ ಧನಸಹಾಯ ಮಾಡಿದ ಸ್ತ್ರೀಪುರುಷರಿಗೂ ಹಾಗೂ ಈ ಗ್ರಂಥವನ್ನು ಸರಿಯಾದ ವೇಳೆಗೆ ಸುಂದರವಾಗಿ ಮುದ್ರಣ ಮಾಡಿಕೊಟ್ಟ ಚಿಕ್ಕವೀರೇಶ್ವರ ಪ್ರಿಂಟಿಂಗ ಪ್ರೆಸ್ಸಿನ ಮಾಲಕರಾದ **ಶ್ರೀಮಾನ್ ವ್ಹಿ. ಜಿ. ಹೊಸಕೇರಿ** ಹಾಗೂ ಪ್ರೆಸ್ಸಿನ ಮ್ಯಾನೇಜರರಾದ **ಎಂ. ಕೆ. ನಾಗಠಾಣ** ನರಗುಂದ. ಇವರಿಗೂ ಪಾರ್ವತಿ-ಪರಮೇಶ್ವರರು ಆಯುರಾರೋಗ್ಯ ಭಾಗ್ಯಾದಿಗಳನ್ನಿತ್ತು ರಕ್ಷಿಸಲೆಂದು ಹಾರೈಸುತ್ತೇನೆ.

|| ಜಯಭುವನೇಶ್ವರಿ ||

ಶ್ರೀಶಕೆ ೧೮೭೮ ದುರ್ಮುಖಿ
ಸಂವತ್ಸರ ಮಾ. ಬ. ೧೪
ಬುಧವಾರ ತಾ. ೨೭-೨-೫೭

ತಮ್ಮ,

ಶ್ರೀ ಪಟ್ಟದಸ್ವಾಮಿಗಳು

# ಮುನ್ನುಡಿ

ಶ್ರೀಯು ಪ್ರಪಂಚದ ಒಂದು ಕೇಂದ್ರಬಿಂದು. ಅವಳಿಲ್ಲದೆ ಯಾವ ಧರ್ಮ, ಕರ್ಮ ನೀತಿ-ನಿಯಮಗಳೂ ಪೂರ್ಣವಾಗುವದಿಲ್ಲ. ಪುರುಷನ ಅರ್ಧಾಂಗ ಅವಳು. ಎಲ್ಲ ಧರ್ಮ ಶಾಸ್ತ್ರಗಳಲ್ಲಿಯೂ ಅವಳನ್ನು ಕುರಿತು ಹೇಳಿದ ಮಾತುಗಳು ದೊರೆಯುತ್ತವೆ. ಪಾತಿವ್ರತ್ಯಾದಿಗುಣಗಳುಳ್ಳ ನಾರಿಯು ಭವಸಾಗರದಲ್ಲಿ ಮುಳುಗುತ್ತಿರುವ ಪುರುಷನನ್ನು ಉದ್ಧರಿಸುತ್ತಾಳೆ. ಆದರೆ ಅವಳೂ ಮಾನವಿಯೆ ತಾನೆ! ಎಲ್ಲ ಪುರುಷರೂ ಯಾವಾಗಲೂ ಸಾತ್ವಿಕರಾಗಿರುವುದು ಅಸಂಭವವಾಗಿರುವಂತೆ ಎಲ್ಲ ಶ್ರೀಯರೂ ಯಾವಾಗಲೂ ಸಾತ್ವಿಕರಾಗಿರುವುದು ಅಸಂಭವ. ರಜಸ್ತಮೋಗುಣಗಳ ಪರಿಣಾಮವಾಗಿ ಮನುಷ್ಯರಿಂದ ಪ್ರಮಾದಗಳು ಜರಗುವುದು ಸ್ವಾಭಾವಿಕ. ಶ್ರೀಯನ್ನಂತು ನಮ್ಮವರು ಅಬಲೆಯೆಂದು ಕರೆದಿಲ್ಲವೇ? ಆದ್ದರಿಂದ ಅವಳಿಂದ ಪ್ರಮಾದ ಜರುಗಿದಲ್ಲಿ ಆಶ್ಚರ್ಯಪಡಬೇಕಾದುದಿಲ್ಲ. ನಾರಿಯು ಸಂತಾನದ ಜನನಿಯಾದ್ದರಿಂದ ಅವಳ ಪಾವಿತ್ರ್ಯದಲ್ಲಿಯೇ ನರಕುಲದ ಪಾವಿತ್ರ್ಯವು ಹುದುಗಿದೆ. ಆದುದರಿಂದಲೆ ನಮ್ಮ ಋಷಿಮುನಿಗಳು ಅವಳ ಪಾವಿತ್ರ್ಯ ರಕ್ಷಣೆಯ ಪ್ರಯತ್ನದಲ್ಲಿ ಅವಳಿಗಾಗಿ ಅನೇಕ ನೀತಿ-ನಿಯಮ, ನಿರ್ಬಂಧನೆಗಳನ್ನು ಹಾಕಿದರು. ಕೆಲವರಂತು ಅವಳ ಸ್ವಾತಂತ್ರ್ಯಕ್ಕೇ ಅರ್ಹಳಲ್ಲವೆಂದು ಉದ್ಘೋಷಿಸಿದರು. ವಸ್ತುಗತ್ಯಾ ಶ್ರೀಯು ಪುರುಷನಷ್ಟೇ ಸ್ವಾತಂತ್ರ್ಯಕ್ಕೆ ಅರ್ಹಳು ಶ್ರೀಯ ಸ್ವಾತಂತ್ರ್ಯವನ್ನು ಅಲ್ಲಗಳೆಯುವ ಧರ್ಮಗ್ರಂಥಗಳ ಕೆಲ ಮಾತುಗಳು ಆಯಾಕಾಲದ ಸಮಾಜವನ್ನನುಲಕ್ಷಿಸಿ ಕೆಲ ಚರಿತ್ರ ಭ್ರಷ್ಟೆಯರಾದ ಗಂಡುಬೀರಿಯರ ವಿಷಯವಾಗಿ ಹೇಳಿದ್ದಲ್ಲದೆ ಬೇರೆಯಲ್ಲ.

ಶ್ರೀಯು ಪುನರ್ವಿವಾಹವಾಗಬಾರದೆಂದು ಬಹುಕಾಲದಿಂದ ನಮ್ಮ ಸನಾತನಿಗಳು ಹೇಳುತ್ತಬಂದಿದ್ದಾರೆ. ಆದರೆ ಅದೇ ಸನಾತನ ಧರ್ಮ-ಶಾಸ್ತ್ರದಲ್ಲಿ ಶ್ರೀಯರಿಗಾಗಿ ಆಪದ್ಧರ್ಮವೂ ಒಂದು ಹೇಳಲ್ಪಟ್ಟಿದೆಯೆಂಬುದನ್ನು ಅವರು ಮರೆಯುತ್ತಾರೆ.

'ನಷ್ಟೇ ಮೃತೇ ಪ್ರವ್ರಜಿತೇ ಕ್ಲೀಬೇಚ ಪತಿತೇಪತೌ ||
ಪಂಚಸ್ವಾ ಪತ್ಸು ನಾರೀಣಾಂ ಪತಿರನ್ಯೋ ವಿಧೀಯತೇ ||'
[ಧರ್ಮಶಾಸ್ತ್ರ]

ಪತಿಯು ನಾಪತ್ತೆಯಾಗಿ ಹೋದರೆ, ಮೃತನಾದರೆ, ನವತಾರುಣ್ಯದಲ್ಲಿಯೇ ತೀವ್ರವೈರಾಗ್ಯದಿಂದ ಸನ್ಯಾಸಿಯಾದರೆ, ನಪುಂಸಕನಾದರೆ, ಪತಿತನಾದರೆ ಈ ಐದು ಆಪತ್ತುಗಳಲ್ಲಿ ಸ್ತ್ರೀಯು ಪುನರ್ವಿವಾಹವಾಗಲು ಅಧಿಕಾರವುಳ್ಳವಳಾಗಿದ್ದಾಳೆ.

ಈ ಧರ್ಮಶಾಸ್ತ್ರದ ಶಾಸನವು ಮನೋವಿಜ್ಞಾನವನ್ನು ಅನುಸರಿಸಿಯೇ ಇದೆ. ಕರುಣಾಳುಗಳಾದ ಮುನಿಗಳು ನಾರಿಯು ವ್ಯಭಿಚಾರಪಂಕಕ್ಕೆ ಬಿದ್ದು ಕಪಟ ಜೀವನವನ್ನು ಸಾಗಿಸುತ್ತ ಪಾಪಭಾಗಿಯಾಗದಿರಲೆಂದೇ ಈ ರೀತಿ ಹೇಳಿದ್ದಾರೆ. ಆದರೆ ಕಟ್ಟರ್ ಸನಾತನಿಗಳು **'ಪತಿತೇ ಪತೌ'** ಎಂಬಲ್ಲಿs ಹೀಗೆ ಅವಗ್ರಹ ಚಿಹ್ನವನ್ನೆಳೆದು (ಪತಿತೇऽಪತೌ) 'ಅಪತೌ' ಎಂದು ಕಲ್ಪಿಸಿ ಸಪ್ತಪದಿ ( ವಿವಾಹಾಂಗವಾದ ಒಂದು ಕರ್ಮ ) ಯಾಗುವ ಪೂರ್ವದಲ್ಲಿ ವರನು ಇನ್ನೂ ಪತಿಯಾಗಿರುವುದಿಲ್ಲ. ವಾದಕಾರಣ ಅಂತಹವ (ಅಪತಿ) ನು ನಷ್ಟ (ನಾಪತ್ತೆ) ನಾದರೆ, ಮೃತನಾದರೆ, ಸನ್ಯಾಸಿಯಾದರೆ, ನಪುಂಸಕನೆಂದು ತಿಳಿದು ಬಂದರೆ, ಪತಿತನಾದರೆ ಕನ್ಯೆಗೆ ಅನ್ಯ ವರನನ್ನು ವರಿಸಲು ಬರುವುದಲ್ಲದೆ ಸಪ್ತಪದಿಯಾದ ಮೇಲೆ ಈ ಐದು ವಿಧ ಆಪತ್ತುಗಳುಂಟಾದರೂ ಮತ್ತೊಬ್ಬನನ್ನು ವರಿಸಲುಬರುವುದಿಲ್ಲ ಎಂದು ಅರ್ಥಮಾಡುತ್ತಾರೆ. ಇದನ್ನು ನವೀನ ಧರ್ಮಶಾಸ್ತ್ರಗಳು ಒಪ್ಪುವುದಿಲ್ಲ **'ಕನ್ಯಾನಾಂ ವರೋऽನ್ಯೋ ವಿಧೀಯತೆ'** ಎಂದು ಇದ್ದಿದ್ದರೆ ಸನಾತನಿಗಳಿಗೆ ಸಮ್ಮತವಾದ ಅರ್ಥಹೊರಡಬಹುದಾಗಿತ್ತೆಂದೂ **'ನಾರೀ ಣಾಂ'** ಎಂದಿರುವದರಿಂದ 'ನಾರೀ' ಪದ ಪ್ರಯೋಗವು ಲಗ್ನವಾದ ಸ್ತ್ರೀಯರಲ್ಲಿಯೇ ವಾಡಿಕೆಯಾಗಿರುವುದಲ್ಲದೆ ಕನ್ಯೆಯರಲ್ಲಿಲ್ಲವಾದ್ದರಿಂದ ಪುರುಷನಿಗೆ ಸಂತಾನವಿಚ್ಛೇದಾದಿ ಆಪತ್ತುಗಳಲ್ಲಿ ಬೇರೆ ವಿವಾಹವು ವಿಧಿಸಲ್ಪಟ್ಟಿರುವಂತೆ ಸ್ತ್ರೀಯಳಿಗೂ ಆಪತ್ಕಾಲದಲ್ಲಿ ವಿವಾ-

ಹಾಂತರವನ್ನು ವಿಧಿಸುವುದೇ ಈ ಶ್ಲೋಕದ ತಾತ್ಪರ್ಯವೆಂದೂ, 'ಽ' ಹೀಗೆ ಅವಗ್ರಹ ಚಿಹ್ನೆಹಾಕಿ 'ಅಪತೌ' ಎಂದು ಕಲ್ಪಿಸಿ, ವಿವಾಹವಾದ ಮರು ದಿನವೇ ಪತಿಯು ಮೃತನಾದರೂ ಪತ್ನಿಯೆನಿಸಿದವಳಿಗೆ ಬೇರೆ ವಿವಾಹವಾಗಲು ಬರುವುದಿಲ್ಲವೆಂದು ಸಾಧಿಸುವುದು ಅಂತಹ ಸ್ತ್ರೀಯಳಿಗೆ ಒಂದು ರೀತಿಯಿಂದ ವ್ಯಭಿಚಾರಕ್ಕೆ ಅನುವು ಮಾಡಿಕೊಟ್ಟಂತಾಗುವುದದೆಂದೂ ಅಥವಾ ಪ್ರತ್ಯಕ್ಷ ಸ್ತ್ರೀ ಹತ್ಯೆಯೆಂದೂ ಅವರು ಹೇಳುತ್ತಾರೆ. ಇದು ವಿಚಾರಾರ್ಹವಾಗಿದೆ. ವಿಶ್ವಾಮಿತ್ರ ಪರಾಶರ ಪ್ರಭೃತಿಗಳು ವಾಯ್ವಾಹಾರ, ಜಲಾಹಾರಾದಿಗಳಿಂದ ಕಠಿಣ ತಪಶ್ಚರ್ಯೆ ಮಾಡಿದವರಾಗಿದ್ದರೂ ಸ್ತ್ರೀಯ ಮುಖಕಮಲವನ್ನು ನೋಡಿದ ಕೂಡಲೆ ಮೋಹಿತರಾದರು. ಹೀಗಿರುವಲ್ಲಿ ಅಂತಹ ತಪಶ್ಚರ್ಯೆಯನ್ನೇನೂ ಮಾಡದ ವಿಧವೆಯಾದ ಓರ್ವ ಹದಿನಾರು ವರ್ಷದ ಸುಂದರಿಯು ಪುರುಷನ ಮುಖಕಮಲವನ್ನು ನೋಡಿದಾಗ ಮೋಹಿತಳಾಗದಿರುವಳೇ ? ಅವಳಿಗಾಗಿ ಆ ಜನ್ಮ ಬ್ರಹ್ಮಚರ್ಯವನ್ನು ವಿಧಿಸಿದರೆ ಆಕೆ ಎಷ್ಟರಮಟ್ಟಿಗೆ ಪಾಲಿಸಬಹುದು ? ಮನುಷ್ಯರಿಗೆಲ್ಲ ಇಂದ್ರಿಯ ಸಂಯಮವು ಒಳ್ಳೆಯನಿಯಮವಾದರೂ ಭೋಗಲಾಲಸಾಮಯವಾದ ಈ ಕಲಿ ಕಾಲದಲ್ಲಿ ಪುರುಷರಿಗೇ ಬ್ರಹ್ಮಚರ್ಯವನ್ನು ಪಾಲಿಸುವುದು ಕಠಿಣವಾಗಿರುವಾಗ "ಸ್ತ್ರೀಯಶ್ಚಾಷ್ಟಗುಣಃ ಸ್ಮೃತಃ" ಎಂಬಂತೆ ಪುರುಷನಿಗಿಂತ ಎಂಟು ಪಟ್ಟು ಕಾಮಾಧಿಕ್ಯವುಳ್ಳವಳಾದ ಸ್ತ್ರೀಯಳು ಬ್ರಹ್ಮಚಾರಿಣಿಯಾಗಿರುವುದು ಸಾಧ್ಯವೇ ? ಸ್ತ್ರೀಯರಿಗೆ ಬ್ರಹ್ಮಚರ್ಯವು ಪೂರಾ ಅಸಾಧ್ಯವೆಂದೇನೂ ನನ್ನ ಅಭಿಪ್ರಾಯವಲ್ಲ. ಯಾವಳಾದರೂ ಅಂತಹ ನಿಯಮವನ್ನು ಪಾಲಿಸಿದರೆ ನಾವೆಲ್ಲರೂ ಆಕೆಯನ್ನು ಆದರ್ಶಸ್ತ್ರೀಯೆಂದು ಭಾವಿಸಿ, ಆಕೆಯ ವಿಷಯದಲ್ಲಿ ನತಮಸ್ತಕರಾಗೋಣ ಆದರೆ ಅಷ್ಟು ಕಠಿಣವ್ರತವನ್ನು ಪಾಲಿಸಲು ಅಸಮರ್ಥಳಾದ ಯಾವಳೊಬ್ಬ ಸ್ತ್ರೀಯಳು ಧರ್ಮಶಾಸ್ತ್ರ ನಿಯಮದಂತೆ ಪುನರ್ವಿವಾಹವಾದರೆ ಅವಳನ್ನು ಕೀಳು ದೃಷ್ಟಿಯಿಂದ ಕಾಣದಿರೋಣ. ಸ್ತ್ರೀಯ ಪಾವಿತ್ರ್ಯ ರಕ್ಷಣೆಯ ಭರದಲ್ಲಿ ಆಕೆಯು ಪುನರ್ವಿವಾಹವಾಗಲೇ ಕೂಡದೆಂದು ನಿಯಮ ಹಾಕಲಿಕ್ಕೆ ಸ್ವತಃ ಆ ನಿಯಮಕ್ಕೆ ಬದ್ಧರಲ್ಲದೆ;

ಪುರುಷರಿಗೆ ಯಾವ ಅಧಿಕಾರವೂ ಇಲ್ಲ. ಒಂದು ಪಕ್ಷ ಅಂತಹ ನಿಯಮ ವಿಧಿಸಿದರೂ ಕಪಟಾಚಾರವನ್ನು ಅದು ತಡೆಯಲಾರದು; ತಡೆದಿಲ್ಲ. ಆದ್ದರಿಂದ ಮೇಲ್ಕಂಡ ಐದು ಆಪತ್ತುಗಳಲ್ಲಿ ಸ್ತ್ರೀಯರಿಗೆ ಪುನರ್ವಿವಾಹಾಧಿಕಾರವುಂಟೆಂಬುದೇ ಸರಿಯಾದ ವಿಚಾರ; ಆಧುನಿಕ ಸಮಾಜೋದ್ಧಾರಕರಾದ **ಶ್ರೀ ವಿವೇಕಾನಂದಾದಿಗಳು** ವಿಧವಾವಿವಾಹವನ್ನು ಒಪ್ಪಿದ್ದಾರೆ. ನಾನೂ ಇದನ್ನು ಅನುಮೋದಿಸುತ್ತೇನೆ.

ಈ ನನ್ನ ವಿಚಾರವು ಪ್ರಸ್ತುತ ಗ್ರಂಥಕರ್ತರಾದ ಪೂಜ್ಯ **ಶ್ರೀ ಕೋಣ್ಣೂರ ಸ್ವಾಮಿಗಳವರ** ವಿಚಾರಕ್ಕೆ ಸರಿಬೀಳುವುದಿಲ್ಲ. ಈ ಹೊತ್ತಿಗೆಯ ಆರಂಭದಲ್ಲಿಯೇ ಗ್ರಂಥಕರ್ತರು ವಿಧವೆಗೆ ಸಂಬಂಧಿಗಳಾರೂ ಇಲ್ಲದಿದ್ದರೆ "ಗುರುರ್ಮಾತಾ ಗುರುಃಪಿತಾ" ಎಂದು ಶಾಸ್ತ್ರವು ಬೋಧಿಸುವುದರಿಂದ ಆಕೆಯು ಸದ್ಗುರುವಿನ ಆಶ್ರಯವನ್ನು ಮಾಡಿಕೊಂಡಿರುವುದು ಶ್ರೇಷ್ಠವಾದುದು. ಒಬ್ಬಳೇ ಎಂದೂ ಇರಕೂಡದು; ಎಂದು ಬರೆದಿದ್ದಾರೆ. ಗುರುವು ತಾಯಿ ತಂದೆ ಸ್ವರೂಪನೆಂಬ ಮಾತೇನೋ ಶಾಸ್ತ್ರೀಯವಾದುದು. ಸ್ತ್ರೀಯಳು ಒಬ್ಬಳೇ ಇರಕೂಡದು, ಎಂಬ ಶ್ರೀಗಳ ಬರವಣಿಗೆಯು ಪ್ರಾಚೀನರ ಮತವನ್ನು ಹೇಳುತ್ತದೆ. ಆದರೆ ಈಗ ಕಾಲವು ಹೊಸತೆನಿಸಿದೆ ಈ ನಮ್ಮ ದೇಶದಲ್ಲಿ ಲಕ್ಷಗಟ್ಟಲೆ ಸ್ತ್ರೀಯರು ಸರಕಾರೀ ವಿಭಾಗಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಒಬ್ಬ ಎಳೆವರೆಯದ ಸ್ತ್ರೀಯು ಅಧ್ಯಾಪಿಕೆಯಾಗಿ ಬಾಳನ್ನು ಸಾಗಿಸುತ್ತಿದ್ದಾಗ ಅವಳ ಪತಿಯು ಸಾಯುವನೆಂದೂ ಅವಳಿಗೆ ಮಕ್ಕಳಾಗಲಿ ಬಂಧುಗಳಾಗಲಿ ಯಾರೂ ಇಲ್ಲವೆಂದೂ ಇಟ್ಟುಕೊಳ್ಳಿ. ಆಗ ಅವಳು ಏನು ಮಾಡಬೇಕು ? ತನ್ನ ಉದ್ಯೋಗವನ್ನು ತ್ಯಜಿಸಿ ಸದ್ಗುರುವಿನಬಳಿಗೆ ಇರಲು ಹೋಗಬೇಕೆ ? ಅಂಥ ಸದ್ಗುರುಗಳಾದರೂ ಎಲ್ಲಾ ಕಡೆಗೆ ಎಲ್ಲಿ ದೊರೆಯುತ್ತಾರೆ ! ಎಲ್ಲೋ ದೊರೆತರೂ ಅಂತಹ ಸ್ತ್ರೀಯಳು ಮಠವನ್ನು ಸೇರುವುದರಿಂದ ಜನತೆಯೇ ನಂದೀತು ! ಮಠದ ವಾತಾವರಣವು ಯಾವರೀತಿ ಮಾರ್ಪಟ್ಟೀತು ! ಅಲ್ಲಿರುವ ಆ ಸದ್ಗುರುವಿನ ಶಿಷ್ಯರಾದ ಬ್ರಹ್ಮಚಾರಿಗಳ ಮೇಲೆ ಯಾವ ಕುಪರಿಣಾಮವೂ ಆಗಲಿಕ್ಕಿಲ್ಲವೇ ? ಆಗಿಯೇ ಬಿಡುತ್ತೆ.

ಮತ್ತು ಅಂತಹ ವಿಧವಾ ಸ್ತ್ರೀಯಳು ಏಕಾಂಗಿಯಾಗಿರಬಾರದೆಂಬ ನಿಯ ಮಕ್ಕೆ ಕಟ್ಟುಬಿದ್ದು ಜೀವನವನ್ನು ನಡೆಸುವ ಉದ್ಯೋಗವನ್ನು ತೊರೆಯು ವುದು ಈಗಿನ ಕಾಲದ ದೃಷ್ಟಿಯಿಂದ ವ್ಯವಹಾರ ಸಂಗತವಲ್ಲ. ಆದ್ದರಿಂದ ಸ್ತ್ರೀಯರಿಗಾಗಿಯೇ ನಿರ್ಮಿಸಲ್ಪಟ್ಟಿರುವ ನಮ್ಮ ಧರ್ಮದ ಕಟ್ಟುಗಳು ಸ್ವಲ್ಪ ಸಡಿಲಾಗಬೇಕು. ಎಂದೋ ಯಾವ ಯುಗದಲ್ಲೋ ಹಾಕಿದ ನಿಯಮ ಗಳನ್ನು ಈಗ ಯಥಾವತ್ತಾಗಿ ಅನ್ವಯಿಸಹೋದರೆ ಒಂದಕ್ಕೊಂದು ಕೂಡುವುದಿಲ್ಲ.

ಈ ನನ್ನ ವಿಚಾರಗಳು ಈ ಸ್ತ್ರೀ-ಧರ್ಮ ಹೊತ್ತಿಗೆಗೆ ವಿರುದ್ಧ ಗಳಾದರೂ ನವೀನರ ಮತವನ್ನು ಪ್ರತಿಬಿಂಬಿಸುವುದರಿಂದ ವಾಚಕರ ಜ್ಞಾ ನಾಭಿವೃದ್ಧಿಗೆ ಅನುಕೂಲ್ಯವುಂಟಾದೀತೆಂದೆಣಿಸಿ ಇವನ್ನಿಲ್ಲಿ ಮೂಡಿಸಿದ್ದೇನೆ.

ಇಂತಿಷ್ಟು ವಿಚಾರ ಭೇದವನ್ನುಳಿದರೆ ಈ ಗ್ರಂಥಕರ್ತರ ಅಭಿಪ್ರಾ ಯವೂ ನನ್ನ ಅಭಿಪ್ರಾಯವೂ ಒಂದೇ ಎಂಬಲ್ಲಿ ಸಂದೇಹವಿಲ್ಲ. ಈ ಪುಸ್ತಕವು ಸ್ತ್ರೀಯರ ಬಗೆಗೆ ಎಷ್ಟೋ ಉದಾತ್ತ ವಿಚಾರಗಳನ್ನೂ ನಿಯ ಮಗಳನ್ನೂ ಪ್ರತಿಪಾದಿಸುತ್ತದೆ; ಸರ್ವಸಾಮಾನ್ಯರಿಗೂ ಅನ್ವಯಿಸುವ ಅನೇಕಷ್ಟೋ ನೀತಿಮಾತುಗಳನ್ನೊಳಕೊಂಡಿದೆ. ಆದುದರಿಂದ ಸ್ತ್ರೀಯರಿಗೆ ಅತ್ಯಂತ ಉಪಾದೇಯವಾಗಿರುವುದಲ್ಲದೆ ಸಾಮಾನ್ಯವಾಗಿ ಸರ್ವರೂ ಇದನ್ನು ಒಮ್ಮೆಯಾದರೂ ಓದಿನೋಡಬೇಕು ಸರ್ವವಿಧದಲ್ಲೂ ಪಾಶ್ಚಾತ್ಯರ ಅನುಕರ ಣವೇ ಮಿಗಿಲೆಂಬ ಮನೋವೃತ್ತಿಯುಳ್ಳ ನವಶಿಕ್ಷಣ ಶಿಕ್ಷಿತರು ಇಂತಹ ಸದ್ಗ್ರಂಥಗಳನ್ನು ಓದಿ ಭಾರತೀಯತೆಯ ಅರಿವನ್ನು ಪಡೆಯಲಿ. ಕೆಲ ಸಮಾಜಗಳಲ್ಲಿ ಸ್ತ್ರೀಯರು ರಜಸ್ವಲೆಯಾದಾಗಲೂ ಅಡಿಗೆ ಇತ್ಯಾದಿ ಎಲ್ಲಾ ಕೆಲಸ ಮಾಡುತ್ತಿರುತ್ತಾರೆ ಇದು ನಿಶ್ಶೀಮ ಅನಾಚಾರ ! ಶೌಚಕ್ಕೆ ಹೋಗಿ ಬಂದಾಗ ಕೈಕಾಲು ಮುಖ ತೊಳೆದುಕೊಳ್ಳುವವರೆಗೆ ಮಾತಾಡದಷ್ಟು ಆಚಾರ ಮಾಡುವವರೂ ಈ ಅನಾಚಾರಕ್ಕೆ ಅನುಮೋದನ ಕೊಡುತ್ತಾರೆ. ಇದು ಎಂತಹ ವಿಚಿತ್ರ !

ಪ್ರಸ್ತುತ ಪುಸ್ತಕವು ಈ ಅನಾಚಾರವನ್ನು ಶಾಸ್ತ್ರೀಯವಾಗಿ ಖಂಡಿಸುತ್ತದೆ; ಇದೇರೀತಿ ಎಷ್ಟೋ ಕುರೀತಿ ಅನಾಚಾರಗಳನ್ನು ಖಂಡಿಸಿ ಸದಾಚಾರಗಳನ್ನು ಬೋಧಿಸುತ್ತದೆ. ಗ್ರಂಥಕರ್ತ ಶ್ರೀಗಳು ಇಂತಹ ಸದ್ಗ್ರಂಥ ರಚನೆ ಮಾಡಿದುದಕ್ಕಾಗಿ ಸರ್ವರಿಂದಲೂ ಅಭಿನಂದನಾರ್ಹರು ಇವರ ಈ ವಿಧದ ಪ್ರಯತ್ನವು ಅನವರತವೂ ಸಾಗಲಿ; ಜನತೆ ಬೆಂಬಲ ನೀಡಲಿ. ಇತಿ ಶಿವಮ್

ಸಾಹಿತ್ಯಾಚಾರ್ಯ, ಕಾವ್ಯತೀರ್ಥ
ಮೀಮಾಂಸಾವಿಶಾರದ, ವೇದಾಂತ ಶಾಸ್ತ್ರೀ
ಪಂ|| ಸಿ. ಶಿವಾಚಾರ್ಯ
ರೌಡಕುಂದಿ ಬೃಹನ್ಮಠ

ದಿ. ೨೫—೯—೧೯೫೫

ಶ್ರೀ ಜಗದ್ಗುರು ಪಂಡಿತಾರಾಧ್ಯೋ ವಿಜಯತೇ

ಶ್ರೀ ಗಿರಿರಾಜ ಸೂರ್ಯಸಿಂಹಾಸನಾಧೀಶ್ವರ

ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ

ಮಹಾಸ್ವಾಮಿಗಳವರು

ಶ್ರೀ ಜಗದ್ಗುರು ಶ್ರೀಶೈಲ ಸೂರ್ಯ ಸಿಂಹಾಸನಮಠ

ಆತ್ಮಕೂರು (ಜಿ. ಕರ್ನೂಲು) ಗುಂತಕಲ್ಲು(ಜಿ. ಅನಂತಪುರ) ಗೆ–ನಂ. 7425

ಮುಕ್ಕಾಂ ಆತ್ಮಕೂರು ತಾ. ೨೧—೩—೫೬

ಇವರ

# ಶುಭಸಂದೇಶ

---

ಆತ್ಮೀಯರಾದ ಶ್ರೀ|| ಷ|| ಬ್ರ|| ಪಟ್ಟದಸ್ವಾಮಿಗಳು ಹಿರೇಮಠ ಕೊಣ್ಣೂರು ಅವರಿಗೆ ಶುಭಾಶೀರ್ವಾದಗಳು.

ತಾವು ರಚಿಸಿರುವ "ಸ್ತ್ರೀಧರ್ಮ" ವೆಂಬ ಗ್ರಂಥವನ್ನು ಪರಿಶೋಧಿಸಿದ್ದಾಯಿತು, ರಚನೆ ಸುಲಭವಾಗಿದೆ. ವಿಷಯಸಂಗ್ರಹ ಸಾಕಷ್ಟಾಗಿದೆ. "ತಾಯಂದಿರು ಸುಧಾರಿಸಬೇಕು" ಎಂದು ಎಲ್ಲರೂ ಹೇಳುತ್ತಾರೆ. ಆದರೆ ಹೇಳುವ ವಿಧಾನ ಭಿನ್ನ ಭಿನ್ನವಾಗಿದೆ. ಪೂರ್ವದ ಶಾಸ್ತ್ರಮಾರ್ಗದಂತೆ ಸುಧಾರಿಸುವುದಾದರೆ ನಮ್ಮ ತಾಯಂದಿರು ಸೀತೆ, ಅರುಂಧತಿ, ಸಾವಿತ್ರಿಯರು ಖಂಡಿತವಾಗಿಯೂ ಆಗುವರು. ಪಾಶ್ಚಾತ್ಯ ಶಿಕ್ಷಣಪ್ರಭಾವಕ್ಕೆ ಒಳಗಾದ ಈಗಿನ ಹಲವು ತಾಯಂದಿರು ಪೋಲೀಸರಾಗಿದ್ದಾರೆ. ಮಿಲಟರಿಯಲ್ಲಿ ಸೇರಿದ್ದಾರೆ; ಇನ್ನೂ ಮುಂದುವರಿದಿದ್ದಾರೆ. ಇಂಥವರಿಂದ ಮುಂದಿನ ಮಕ್ಕಳ ಸುಧಾರಣೆ ಶಾಸ್ತ್ರ ವಿಧಿಗನುಸರಿಸಿ ಹೇಗೆನಡೆದೀತು ? ಎಂದು ಸಂದೇಹ ಪಡಬೇಕಾಗಿದೆ. ಕಾಲಚಕ್ರವು ಎತ್ತ ಹರಿಯುವುದೋ ನಿರ್ಣಯಿಸಲುಬಾರದಾಗಿದೆ.

ಇಂತಹ ವಿಷಮ ವಾತಾವರಣದಲ್ಲಿ "ಸ್ತ್ರೀಧರ್ಮ" ದಂತಹ ಹಲವಾರು ಗ್ರಂಥಗಳನ್ನು ಸದಾಚಾರ ಸಂಪನ್ನರಾದ ಪಂಡಿತರೂ, ಸ್ವಾಮಿ

ಗಳೂ ರಚಿಸಿ ದಾರಿದಪ್ಪುತ್ತಿರುವ ಜನಾಂಗವನ್ನು ಸರಿಯಾದ ದಾರಿಯತ್ತ ಸೆಳೆದು ಉದ್ಧರಿಸುವುದು ಮುಖ್ಯ ಕಾರ್ಯವಾಗಿದೆ.

ಧಾರ್ಮಿಕ ರಂಗದಲ್ಲಿ ತಂದೆಗಿಂತಲೂ ತಾಯಿಯಸ್ಥಾನ ಪೂಜ್ಯ ವಾಗಿದೆ, ನಮ್ಮ ಧರ್ಮದೇವತೆ ಆದಿಶಕ್ತಿ, ಈಶ್ವರನ ಅರ್ಧ ದೇಹವನ್ನು ವಶಪಡಿಸಿಕೊಂಡಿದ್ದಾಳೆ; ಆಕೆ ಹೆಣ್ಣು. ವಿದ್ಯಾದೇವತೆ ಸರಸ್ವತಿ ಹೆಣ್ಣು ಧನದೇವತೆ ಲಕ್ಷ್ಮೀ ಹೆಣ್ಣು. ಭೂ ಮಾತೆ ಹೆಣ್ಣು. ಜಲದೇವತೆ ಗಂಗೆ ಹೆಣ್ಣು, ಹೀಗೆ ಹಲವಾರು ತರವಾಗಿ ನಮ್ಮ ಆರ್ಯರು ಮಾತೃಸ್ಥಾನಕ್ಕೆ ವೇದ ವೇದಾಂತಗಳಲ್ಲಿಯೂ ಗೌರವವನ್ನು ಕೊಡುತ್ತ ಬಂದಿದ್ದಾರೆ. ಇಂತಹ ಪವಿತ್ರ ವಾದ ಮಾತೃತ್ವವನ್ನು ಕಾಪಾಡಿಕೊಂಡು ಜಾತಿ-ಜಾತಿಗಳಲ್ಲಿಯ ತಾಯಂ ದಿರು ಸದಾಚಾರ ಸಂಪನ್ನರಾಗಿ ಶುದ್ಧಸಂತಾನವನ್ನು ಹಡೆದು ಜಗತ್ತಿಗೆ ಉಪಕಾರ ಮಾಡಬೇಕು. ದುರಾಚಾರಕ್ಕೆ ಬಹಿಷ್ಕಾರ ಹಾಕಬೇಕು. ದುರಾ ಚಾರವೇ ಸಾಂಕರ್ಯಕ್ಕೆ ಕಾರಣವಾಗಿದೆ. ಸಾಂಕರ್ಯವೇ ನರಕಕ್ಕೆ ಕಾರಣ ವಾಗಿದೆ. ಎಂದು ವೇಧಾಂತ ಚಕ್ರವರ್ತಿಯಾದ ಶ್ರೀಕೃಷ್ಣನು ಅರ್ಜುನನಿಗೆ ಬೋಧಿಸಿರುವುದನ್ನು ಎಲ್ಲ ಧರ್ಮದ ತಾಯಂದಿರೂ ಅರಿತುಕೊಳ್ಳಬೇಕು. ತಮ್ಮ ತಮ್ಮ ಪೂರ್ವಪರಂಪರಾಗತ ಪಧ್ಧತಿಯಂತೆ ಬಾಂಧವ್ಯವನ್ನು ಮಾಡ ಬೇಕು. ಇದಕ್ಕೆ ವಿರುಧ್ಧವಾಗಿ ನಡೆಯುವುದರಿಂದ ವರ್ಣಸಂಕರವೂ, ಆವರ್ಣ ಸಾಂಕರ್ಯದಿಂದ ಪೂಜ್ಯಪೂಜಕಭಾವವೂ ಕೆಡುವುದರಿಂದ ಗುರುದೇವತೆ ವೇದಾದಿ ಶಾಸ್ತ್ರ ವಿಷಯದಲ್ಲಿ ನಾಸ್ತಿಕತೆ ತಲೆದೋರುವುದು. ಕಾರಣ ಸ್ತ್ರೀ-ಧರ್ಮ ದಂತಹ ಶಾಸ್ತ್ರವಿಧಿಗನುಸರಿಸಿ ರಚಿತವಾಗಿರುವ ಗ್ರಂಥಗಳನ್ನು ಅಭ್ಯಾಸಮಾಡಿ ನರನಾರಿಯರು ಒಳ್ಳೆಯ ದಾರಯಿಂದ ನಡೆಯಲೆಂದು ಆಶಿಸಿ ಗ್ರಂಥಕರ್ತಾರಿಗೆ ಈ ಶುಭಸಂದೇಶವನ್ನು ಕರುಣಿಸಿದೆ.

ಇಲ್ಲಿ ಶ್ರೀ. ಜ. ವಾ. ಪಂ. ಶಿ

ಮಹಾಸ್ವಾಮಿನಃ

ಎಂದು ದೇವನಾಗರಿಯಲ್ಲಿ ಮಹಾಸನ್ನಿಧಿಯವರ ಸಹಿ ಇದೆ



ಕೊಣ್ಣೂರು ಬೃಹನ್ಮಠದ ಪಟ್ಟಾಧ್ಯಕ್ಷರಾದ,
ಶ್ರೀ॥ ಷ॥ ಬ್ರ॥ ಮುರುಗೇಂದ್ರ ಶಿವಾಚಾರ್ಯ
ಸ್ವಾಮಿಗಳವರು

# ವಿಷಯಾನುಕ್ರಮಣಿಕೆ



# ೧

# ಸ್ತ್ರೀ-ಧರ್ಮ

---

**ಯತ್ರನಾರ್ಯಸ್ತು ಪೂಜ್ಯಂತೇ ರಮಂತೇ ತತ್ರದೇವತಾಃ !**

ಯಾವ ಮನೆಯಲ್ಲಿ ಭಾರತನಾರೀ ಮಣಿಗಳು ಸಂತುಷ್ಟ ಚಿತ್ತವುಳ್ಳವರಾಗಿ ಸತ್ಕಾರವನ್ನು ಪಡೆಯುತ್ತಿರುವರೋ ಆ ಮನೆಯಲ್ಲಿ ದೇವತಗಳು ಸಂತೋಷದಿಂದ ತಾಂಡವನ್ನು ಮಾಡುತ್ತಿರುವರೆಂದು ಧರ್ಮಶಾಸ್ತ್ರದಲ್ಲಿ ಹೇಳಲ್ಪಟ್ಟಿರುವದನ್ನು ವಿಚಾರ ಮಾಡಿದರೆ ನಮ್ಮ ಭಾರತ ಮಹಿಳೆಯರ ಗೌರವವು ಎಷ್ಟಿರಬಹುದು ! ಎಂಬುದನ್ನು ನಿಚ್ಚಳವಾಗಿ ವ್ಯಕ್ತ ಪಡಿಸುತ್ತದೆ. ಬಳ್ಳಿಯು ಬೇಕಾದಷ್ಟು ದೊಡ್ಡದೂ ಬಲಿಷ್ಟವೂ ಆಗಿದ್ದರೂ ಗಿಡದ ಆಶ್ರಯವನ್ನು ಹೇಗೆ ಮಾಡಬೇಕಾಗುತ್ತಿದೆಯೋ, ಹಾಗೇಯೇ ಸ್ತ್ರೀಯರಾದರೂ ಒಬ್ಬರ ಆಶ್ರಯದಲ್ಲಿರಬೇಕಾಗುತ್ತದೆ. ಚಿಕ್ಕಂದಿನಿಂದ ವಿವಾಹವಾಗುವವರೆಗೆ ತಂದೆ ತಾಯಿ ಅಣ್ಣ ತಮ್ಮಂದಿರ ಆಜ್ಞೆಯಲ್ಲಿಯೂ, ಲಗ್ನವಾದನಂತರ ಗಂಡ ಅತ್ತೆ ಮಾವಂದಿರ ಆಜ್ಞೆಯಲ್ಲಿಯೂ, ಮುಪ್ಪಿನ ಕಾಲದಲ್ಲಿ ಮಕ್ಕಳ ಆಜ್ಞೆಯಲ್ಲಿಯೂ ಇರಬೇಕು. ಗಂಡನು ವೃತಪಟ್ಟರೆ ಜಿತೇಂದ್ರಿಯಳಾಗಿ ತವರು ಮನೆಯಲ್ಲಿಯಾಗಲಿ, ಗಂಡನ ಮನೆಯಲ್ಲಿಯಾಗಲಿ ಇರಬೇಕು ಅವರಾರೂ ಇರದಿದ್ದರ 'ಗುರುರ್ಮಾತಾ ಗುರುಃಪಿತಾ' ಅಂದರೆ ಗುರುವೇ ತಾಯಿ ಗುರುವೇ ತಂದೆ ಎಂದು ಶಾಸ್ತ್ರವು ಭೋದಿಸುವುದರಿಂದ ಸದ್ಗುರುವಿನ ಆಶ್ರಯವನ್ನು ಮಾಡಿಕೊಂಡಿರುವುದು ಶ್ರೇಷ್ಠವಾದುದು. ಈ ರೀತಿ ಆಶ್ರಯ ಮಾಡಿಕೊಂಡಿರಬೇಕಲ್ಲದೆ ಒಬ್ಬಳೇ ಎಂದಿಗೂ ಇರಕೂಡದು. ಏಕೆಂದರೆ ಅವಳು ಅಬಲೆಯೂ ಸ್ವಭಾವತಃ ಕೋಮಲಳೂ ಆಗಿರುವುದರಿಂದ ಸ್ವತಂತ್ರಳಾಗಿ ಇರಲಿಕ್ಕೂ ಕೆಲ

ಪವನ್ನು ಮಾಡಲಿಕ್ಕೂ ಸಮರ್ಥಳಲ್ಲ. ಏಕಾಂಗಿಯಾಗಿರುವುದರಿಂದ ಲೋಕಾಪವಾದವು ಬರುವುದು. ಹಿರಿಯರ ಮಾತನ್ನು ಲಕ್ಷ್ಯಕ್ಕೆ ತಾರದೆ ಯಾವಾಗಲೂ ಮೋರೆಯನ್ನು ಗಂಟಿಕ್ಕಿಕೊಂಡು ಸಿಟ್ಟಿನಿಂದ ಕೆಲಸವನ್ನು ಮಾಡುತ್ತ, ತನ್ನ ಮನಸ್ಸಿಗೆ ಬಂದಂತೆ ನಡೆಯುವ ಸ್ತ್ರೀಯಳು ಲೋಕದಲ್ಲಿ ಮಾನ್ಯಳಾಗಳು. ಇದೇ ವಿಷಯವನ್ನು ಕುರಿತು:—

ಪತಿ-ದೈವ ವೆಂದರಿದು ನಡೆವ ಸತಿಗಹುದು ಪರ
ಗತಿಯಿಲ್ಲದಂಗನೆಯ ರತಿ ಸಾಹಸಿಗಳವರ ।
ಕೃತಕ ಶೀಲಂಗಳಂ ನಂಬಲಾಗದು ಮೇಣ್ ಸ್ವತಂತ್ರಮಂ ಕೊಡಲಾಗದು ।
ಪಿತನಿಂದ ಬಾಲ್ಯದೊಳ್ ಪತಿಯಿಂದ ಪ್ರಾಯದೊಳ್ ।
ಸುತನಿಂದ ವೃದ್ಧಾಪ್ಯದೊಳ್ ಕುಲಸ್ತ್ರೀಸುರ ।
ಕ್ಷಿತೆಯಾಗದಿರ್ದೊಡವಳಿಂದ ನಿಜವಂಶಕುಪಹತಿ ಬಂದುದಲ್ಲದಿರದು ॥೧॥
ಮಾವಂಗೆ ಭಾವಂಗೆ ಮೇಣತ್ತೆಗೈದೆ ಸಂ ।
ಭಾವಿಸುತ ಸೇವಿಸುತ ಕಾಂತಂಗೆ ಪ್ರೀತಿ ಸಂ ।
ಜೀವನವನೀವ ನವಯುವತಿಗಿಹ ಲಕ್ಷಣಂ ಸುಕೃತ ಫಲಮೆಂತಲ್ಲದೆ ॥
ಪಾವಿನಂತಾವಿನಂತಡಿಗಡಿಗೆ ಮೊರೆದೆದ್ದು ।
ಡಾವರಿಸಿ ಸೀವರಿಸಿ ಮನೆಗೆಲಸಮಂ ಗೈಯ
ದಾವನಿತೆ ಸಾವನಿತೆ ಲೇಸೆನಿಸದಿಹಳು ತತ್ಪತಿಗೆ ತದ್ಗುರು ಜನಕ್ಕೆ ॥೨॥

ಜೈಮಿನಿಯು ಈ ಪ್ರಕಾರ ಬೋಧಿಸುತ್ತದೆ. ಪಾತಿವ್ರತ್ಯ ಧರ್ಮವನ್ನು ಕಾಯ್ದುಕೊಂಡು ಸತ್ಪುರುಷರನ್ನು ಆಶ್ರಯ ಮಾಡಿಕೊಂಡಿದ್ದರೂ,ಲೋಕದಲ್ಲಿ ಕೆಲವು ದುರಾತ್ಮರು. ದೋಷಾರೋಪಣೆಯನ್ನು ಕೊಡಬಹುದು. ಗೂಗೆಯು ಸೂರ್ಯನನ್ನು ನಿಂದಿಸಿದರೆ ಅವನು ಪ್ರಕಾಶ ಹೀನನಾಗದೆ ತನ್ನ ನಿರ್ಮಲವಾದ ಪ್ರಕಾಶವನ್ನು ಹೇಗೆ ಹರಡುವನೋ, ಅದರಂತೆಯೇ ದುರಾತ್ಮರು ಪತಿವ್ರತಾ ಸ್ತ್ರೀಯರಿಗೆ ಬೇಕಾದಷ್ಟು ಅಪವಾದವನ್ನು ಕೊಟ್ಟರೂ ಪತಿವ್ರತೆಯರು ಅವರ ಅಪವಾದಕ್ಕೆ ಕುಗ್ಗಿ ಕಳೆಗುಂದದ, ತಮ್ಮ ತಮ್ಮ ಕಾರ್ಯದಲ್ಲಿ ತತ್ಪರರಾಗುವರು. ಸ್ತ್ರೀಯರು ತವರು ಮನೆಯಲ್ಲಿದ್ದಾಗ ತಂದೆ ತಾಯಿ ಅಣ್ಣ ತಮ್ಮ ಅಕ್ಕ ತಂಗಿಯರನ್ನೂ ಅಥಿತಿಗಳನ್ನೂ ಪ್ರೇಮ ಭಾವ

ದಿಂದ ಉಪಚರಿಸುತ್ತ, ಅವರು ಹೇಳಿದ ಕೆಲಸವನ್ನು ಲಕ್ಷ್ಯಗೊಟ್ಟು ಮಾಡುತ್ತ ಎಲ್ಲರ ಪ್ರೀತಿಗೆ ಪಾತ್ರರಾಗಿರುವಂತೆ, ಗಂಡನ ಮನೆಯಲ್ಲಿಯೂ ಗಂಡನೇ ದೇವರೆಂದು ಭಾವಿಸಿ ಉಪಚಾರ ಮಾಡುತ್ತಿರಬೇಕು. ಪತಿಯ ಸುಖವೇ ತನ್ನ ಸುಖವೆಂದು ತಿಳಿದು ಯಾವಾಗಲೂ ಪತಿಯ ಕಲ್ಯಾಣವನ್ನು ಬಯಸುತ್ತಿರಬೇಕು. ಮಾವ, ಭಾವ ಮೈದುನರನ್ನು ಅತ್ತೆ, ನಾದಿನಿಯರನ್ನು ಪ್ರೀತಿಯಿಂದ ಉಪಚರಿಸುತ್ತ ಒಬ್ಬರಿಗೊಬ್ಬರು ಪ್ರೇಮದಿಂದ ನಡೆದುಕೊಳ್ಳಬೇಕು. ದುಷ್ಟ ಸ್ತ್ರೀಯರನ್ನು ಕುರಿತು ಒಬ್ಬ ನೀತಿಕಾರನು:—

ಗಂಡನಿಗಿಕ್ಕದೆ ಮಕ್ಕಳ
ಕಂಡಾಗಲೆ ಬೈಯ್ದು ಹೊಯ್ದು ಮನೆವಡವೆಗಳಂ।
ಕಂಡವರಿಗಿಕ್ಕಿ ಕೆಡಿಸುವ।
ಹೆಂಡತಿಯನ್ನು ಆಳುತಿಪ್ಪ ಗಂಡಂ ಭಂಡಂ ॥೧॥

ಎಂದು ಹೇಳಿರುತ್ತಾನೆ.

ಪತಿವ್ರತಾ ಶಿರೋಮಣಿಯೂ, ಗಂಡನ ಹಾಗೂ ಗುರುಹಿರಿಯರ ಆಜ್ಞಾಧಾರಕಳೂ, ನೀರೋಗಿಯೂ, ಮನೆಯೊಳಗಿನ ವಸ್ತು ವಡವೆಗಳನ್ನು ಜೋಪಾನ ಮಾಡುವವಳೂ, ಗಂಡರು ಮಕ್ಕಳು ಹಿರಿಯರು ಅತಿಥಿಗಳನ್ನು ಉಪಚರಿಸುವವಳೂ, ಆದ ಸ್ತ್ರೀಯಳ ಮೇಲೆ ಮತ್ಸರದಿಂದ ಅಪವಾದವನ್ನು ಹೊರಿಸಿ ವೈರತ್ವವನ್ನು ಬೆಳೆಯಿಸಿ ಬಿಡುವುದು ಮಹಾಪಾಪದಾಯಕವಾಗಿರುವದು. ಸ್ತ್ರೀಯರು ತಮ್ಮ ಪತಿಯು ಏಳುವುದಕ್ಕಿಂತ ಪೂರ್ವದಲ್ಲಿ ಎದ್ದು ಶೌಚವಿಧಿಯನ್ನು ತೀರಿಸಿ ಕೈಕಾಲುಮುಖ ಪ್ರಕ್ಷಾಲನೆಯನ್ನು ಮಾಡಿಕೊಂಡು ಗುರು ದೇವರಿಗೂ ಗಂಡನಿಗೂ ಹಿರಿಯರಿಗೂ ನಮಸ್ಕಾರವನ್ನು ಮಾಡಿ ಮನೆಯ ಕಸವನ್ನು ತೆಗೆದು ಸಾರಣೆಯನ್ನು ಮಾಡಿ ರಂಗೋಲಿಯನ್ನಿಟ್ಟು ಭಾಂಡೆಗಳನ್ನು ಬೆಳಗಿ, ಅಡಿಗೆಯ ಸಾಹಿತ್ಯವನ್ನು ಸಿದ್ಧಮಾಡಿಟ್ಟುಕೊಂಡು ಸ್ನಾನವನ್ನು ಮಾಡಿ ಮಡಿ ನೀರನ್ನು ತಂದು, ತಮ್ಮ ಧರ್ಮಾನುಸಾರವಾಗಿ ನಿತ್ಯಕರ್ಮಾನುಷ್ಠಾನವನ್ನು ತೀರಿಸಿಕೊಂಡು ಪಾಕವನ್ನು ಮಾಡಿ, ಗುರು-ದೇವರಿಗೆ ನೈವೇದ್ಯ ಮಾಡಿ ಮನೆಯೊಳಗಿನ ಹುಡುಗರಿಗೂ, ಹಿರಿಯರಿಗೂ

ಊಟ ಮಾಡಿಸಿ ಅನಂತರ ತಾನು ಊಟ ಮಾಡಬೇಕು. ಎಲ್ಲರೂ ಊಟ ಮಾಡಿದ ಮೇಲೆ ತನಗೆ ಉಳಿಯಲಿಕ್ಕಿಲ್ಲವೆಂದು ತನಗೆ ಮೊದಲೇ ಬೇಕಾದಷ್ಟು ತೆಗೆದುಕೊಡು ಉಪಚರಿಸುವ ಸ್ತ್ರೀಯರು ಅನೇಕರಿದ್ದಾರೆ. ಇವರು ರಾಕ್ಷಸ ವರ್ಗಕ್ಕೆ ಸೇರಿದವರಲ್ಲದೆ ಮನುಷ್ಯ ವರ್ಗಕ್ಕೆ ಸೇರಿದವರಲ್ಲ. ಇಂಥವರ ಅನುಕರಣವನ್ನು ಯಾರೂ ಮಾಡಬಾರದು. ಕೆಲವು ಸ್ತ್ರೀಯರು ಮುಟ್ಟಾದಾಗ ಪಾಕಾದಿಗಳನ್ನು ಮಾಡುತ್ತಾರೆ. ಇದು ಅತ್ಯಂತ ಪಾಪದಾಯಕವು. ಆದ್ದರಿಂದ ಅತ್ಯಂತ ಶಾಸ್ತ್ರ ವಿರೋಧವಾದ ಈ ಕಾರ್ಯವನ್ನು ಮಾಡಬಾರದು ಮುಟ್ಟಾದನಂತರ ನಾಲ್ಕು ರಾತ್ರಿಗಳ ವರೆಗೂ ಪಾಕಾದಿಕ್ರಿಯೆಗಳನ್ನು ಮಾಡಲಿಕ್ಕೂ ಸ್ಪರ್ಶಕ್ಕೂ ಅಧಿಕಾರವಿಲ್ಲವು. ಸ್ನಾನ ಮಾಡಿ ತನ್ನ ಲಿಂಗ ಪೂಜೆಯನ್ನು ಮಾಡಲಿಕ್ಕೆ ಮಾತ್ರ ಅಧಿಕಾರವಿರುವುದಲ್ಲದೆ, ಉಳಿದ ಕಾರ್ಯಕ್ಕೆ ಅಧಿಕಾರವಿಲ್ಲ. ಆದ್ದರಿಂದ ಈ ಶಾಸ್ತ್ರೀಯ ಪದ್ಧತಿಯನ್ನು ಆಚರಿಸಿ ಶಿವಪ್ರೀತಿಗೆ ಪಾತ್ರರಾಗಬೇಕೆಂದು ಸೂಚಿಸುತ್ತೇವೆ.

## ಭಾಗ ೨

ಸ್ತ್ರೀಯರು ಕೆಲಸವಿಲ್ಲದಾಗ ನಿರರ್ಥಕವಾಗಿ ಹೊತ್ತುಗಳೆಯದೆ ಪುರಾಣ ಪುಣ್ಯಕಥೆ ಮೊದಲಾದವುಗಳನ್ನು ಕೇಳುತ್ತ ಕಲಿತವರಿದ್ದರೆ ಸ್ವತಃ ಉತ್ತಮಗ್ರಂಥಗಳನ್ನು ಓದುತ್ತ ತಾವು ಅದರಂತೆ ನಡೆಯುವದಲ್ಲದೆ ಪರಸ್ತ್ರೀಯರನ್ನೂ ಸುಧಾರಿಸಬೇಕು. ಇಂತಹ ಕಾರ್ಯವನ್ನು ಕೈಕೊಂಡ ಸ್ತ್ರೀಯರಲ್ಲಿ ಅಗ್ರಸ್ಥಾನವನ್ನು ಪಡೆದವರೆಂದರೆ ಸೌ|| ಭಾಗೀರತಿಬಾಯಿ ಕಟಾಪ ಸಾ|| ಸೊಲ್ಲಾಪೂರ ಇವರೆಂದು ಹೇಳಬಹುದು. ಇವರು ಸ್ತ್ರೀಯರಿಗೆ ನಿತ್ಯದಲ್ಲಿಯೂ ಸ್ತ್ರೀ ಧರ್ಮನೀತಿಯರನ್ನು ಧಾರ್ಮಿಕ ಶಾಸ್ತ್ರೀಯ ವಿಷಯಗಳನ್ನೂ

ಬೋಧಿಸುತ್ತ, ಎಷ್ಟೋ ಸ್ತ್ರೀಯರನ್ನು ಸುಧಾರಿಸಿದ್ದು ಪಂಚಾಚಾರ್ಯ ಪ್ರಭಾಪತ್ರಿಕೆಯಲ್ಲಿ ಪ್ರಸಿದ್ಧವಾಗಿದೆ. ಇಂತಹ ಸ್ತ್ರೀಯರು ಹುಟ್ಟುವದು ಸ್ತ್ರೀಸಮಾಜದ ಭಾಗ್ಯೋದಯದವೆಂದೇ ಹೇಳಬೇಕಾಗಿದೆ; ಇರಲಿ. ಸ್ತ್ರೀಯರಿಗೆ ಪಾತಿವ್ರತ್ಯಗುಣವು ಅಲಂಕಾರ ಸ್ವರೂಪವಾಗಿರುವದು; ಪಾತಿವ್ರತ್ಯಗುಣ ವೊಂದಿದ್ದರೆ ಸ್ತ್ರೀಯರಿಗೆ ಲೋಕದಲ್ಲಿ ಅಸಾಧ್ಯವಾದುದು ಯಾವುದೂ ಇಲ್ಲ. ಆದುದರಿಂದಲೇ "ಸತಿಗೆ ಪಾತಿವ್ರತ್ಯವೇ ಭೂಷಣಂ" ಎಂದು ಸೋಮೇಶ್ವರ ಶತಕದಲ್ಲಿ ಹೇಳಲ್ಪಟ್ಟದೆ. ತಮ್ಮ ಕರ್ಮಾನುಸಾರವಾಗಿ ದೊರೆತ ಪತಿಯು ಕುಂಟನೇ ಇರಲಿ, ಕುರುಡನೇ ಇರಲಿ, ವಿದ್ವಾಂಸನೇ ಇರಲಿ, ಮೂರ್ಖನೇ ಇರಲಿ. "ಪಾಲಿಗೆ ಬಂದದ್ದು ಪ್ರಭುದತ್ತ ಪಂಚಾಮೃತ" ಎಂದು ಭಾವಿಸಿ ಪತಿಯ ಗುಣಾವಗುಣಗಳನ್ನು ಎಣಿಸದೆ ತಮ್ಮ ಪತಿಯೇ ಸರ್ವ ಸೌಭಾಗ್ಯ ವೆಂದು ತಿಳಿದು ಸೀತಾ, ದ್ರೌಪದಿ, ಅರುಂಧತಿ, ಮಲ್ಲಮ್ಮ: ಮೊದಲಾದ ಪತಿವ್ರತಾ ಸ್ತ್ರೀಯರ ಮೇಲ್ಪಂಕ್ತಿಯನ್ನು ಅನುಸರಿಸಿ ಅವರ ಮಾಲಿಕೆಯಲ್ಲಿ ಸೇರಿಕೊಳ್ಳಬೇಕಲ್ಲದೆ ಈಗಿನ ಪಾಶ್ಚಾತ್ಯ ಶಿಕ್ಷಣ ಪ್ರಭಾವದಿಂದ ಸ್ವಾತಂತ್ರ್ಯ ಪರಾಯಣೆಯರಾಗಿ ಕಾಮವಿಕಾರದಿಂದಾಗಲಿ, ದುಡ್ಡಿನ ಆಶೆಯಿಂದಾಗಲಿ, ಉಡಿಗೆ-ತೊಡಿಗೆಗಳ ಆಶೆಗಾಗಲಿ, ಸಿಲುಕಿ ಪರಪುರುಷರನ್ನು ಅಪೇಕ್ಷಿಸುವದು ಅನೀತಿಕರವೂ, ಪಾಪದಾಯಕವೂ ಆಗುವದು. ಲೋಕದಲ್ಲಿ ವ್ಯಭಿಚಾರಿಣಿ ಯಾದ ಸ್ತ್ರೀಯಳು ಎಷ್ಟು ನಿಯಮೋಪವಾಸಾದಿ ವ್ರತಗಳನ್ನಾಚರಿಸುತ್ತಿ-ದ್ದರೂ, ಆ ವ್ರತಗಳೆಲ್ಲವೂ ನಿಷ್ಫಲಗಳಾಗುವವು. ಆದ್ದರಿಂದ ನಮ್ಮ ಭಾರ ತದ ಮಹಿಳೆಯರು ಇಂತಹ ವಿಷಮ ಪರಸ್ಥಿತಿಯನ್ನು ಎಂದೂ ತಂದು ಕೊಳ್ಳಬಾರದು.

ಡೊಂಕಾದ ಕಟ್ಟಿಗೆಯನ್ನು ನೆಟ್ಟಗೆ ಮಾಡಬಹುದು; ಮಳಲಿನಲ್ಲಿ ತೈಲವನ್ನು ತೆಗೆಯಬಹುದು; ಅರಣ್ಯದಲ್ಲಿರುವ ಸಿಂಹವನ್ನು ಕಟ್ಟಬಹುದು; ಹೋಗುವ ಹುಲಿಯನ್ನು ತಡೆಯಬಹುದು; ಆದರೆ ಸ್ತ್ರೀಯರ ಮನಸ್ಸನ್ನು ಕಂಡು ಹಿಡಿಯುವದು ಯಾರಿಂದಲೂ ಸಾಧ್ಯವಿಲ್ಲ.

ಸ್ತ್ರೀಯಶ್ಚರಿತ್ರಂ ಪುರುಷಸ್ಯ ಭಾಗ್ಯಂ ।
ದೇವೋನ ಜಾನಾತಿ ಕುತೋಮನುಷ್ಯಃ ॥

ಸ್ತ್ರೀಯರ ಚರಿತ್ರವನ್ನೂ ಗಂಡಸಿನ ಭಾಗ್ಯವನ್ನೂ ದೇವರಿಂದಲೂ ತರ್ಕಿಸಲು ಅಸಾಧ್ಯವು. ಅಂದ ಮೇಲೆ ಮನುಷ್ಯನಿಗೆ ಗೊತ್ತಾಗುವದು ಹೇಗೆ ? ಈ ಉಕ್ತಿಯಾದರೂ ಮೇಲಿನ ವಿಷಯವನ್ನೇ ಸ್ಪಷ್ಟಪಡಿಸುತ್ತದೆ. ಆದುದರಿಂದ ನಮ್ಮ ಭರತಖಂಡದ ಸ್ತ್ರೀಯರು ಇಂತಹ ಅತ್ಯಾಚಾರಕ್ಕೆ ಬೀಳದಂತೆ ಸರ್ವಮಂಗಳೆಯು ಇವರಿಗೆ ಸದ್ಬುದ್ಧಿಯನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.



೨

# ಸ್ತ್ರೀ ಶಿಕ್ಷಣದ ಆವಶ್ಯಕತೆ

ಸ್ತ್ರೀ ಶಿಕ್ಷಣದ ಆವಶ್ಯಕತೆಯೆಂದರೆ ಸ್ತ್ರೀಯರಿಗೆ ವಿದ್ಯೆ ಕಲಿಸುವುದು ಮುಖ್ಯವಾಗಿದೆಯೆಂದು ಅರ್ಥ.

ಕಲಿಸುವುದೆಂದರೆ ಈಗಿನ ಬರಿಯ ಓದು ಬರಹ ವಿದ್ಯೆಯನ್ನಲ್ಲ. ಇದರಿಂದ ಸ್ತ್ರೀಯರಿಗೆ ವಿಶೇಷ ಉಪಯೋಗವಾಗಲಾರದು. ಈ ವಿದ್ಯೆಯ ಸಂಗಡ ನೂಲುವುದು, ಹೊಲೆಯುವುದು, ನೇಯುವುದು, ಕುಟ್ಟುವುದು, ಬೀಸುವುದು, ಹೈನ ಮಾಡುವುದು, ಅಡಿಗೆಮಾಡುವುದು, ಊಟಕ್ಕೆಡೆಮಾಡುವುದು, ಶಿಶು ಸಂರಕ್ಷಣೆ ಮಾಡುವುದು, ಇವೇ ಮೊದಲಾದ ವಿದ್ಯೆಗಳನ್ನು ಕಲಿಸಬೇಕು.ಅಂದರೆ ಪ್ರಪಂಚಕ್ಕೆಎಲ್ಲತರದಿಂದಲೂಒಳ್ಳೇಅನಕೂಲವಾಗುವುದು

ಪಕ್ಷಿಗಳಿಗೆ ಎರಡು ರೆಕ್ಕೆಗಳು ಸರಿಯಾಗಿದ್ದರೇನೇ ಅದರ ಸಂಚಾರ ಕಾರ್ಯವು ಸರಿಯಾಗಿ ನಡೆಯುವುದಲ್ಲದೆ ಒಂದು ರೆಕ್ಕೆಯಿಂದ ಸರಿಯಾಗಿಹೇಗೆ ನಡೆಯುವುದಿಲ್ಲವೋ ಅದರಂತೆಯೇ, ಸೃಷ್ಟಿಯ ಕಾರ್ಯವು ಸರಿಯಾಗಿ ನಡೆಯಬೇಕಾದರೆ ಸತಿ-ಪತಿಗಳಿಬ್ಬರೂ ಅವಶ್ಯಬೇಕು. ಇಬ್ಬರೂ ಸಹಾಯಕರಾಗದಿದ್ದರೆ ಸೃಷ್ಟಿ ಕಾರ್ಯವು ನಿಂತು ಹೋಗುವುದಲ್ಲದೆ ಪ್ರಪಂಚವು ಸರಿಯಾಗಿ ನಡೆಯಲಾರದು.

**ಸ್ತ್ರೀಯರ ಕರ್ತವ್ಯ:—** ಮನೆಯೊಳಗೆ ಅಡಿಗೆ ಮಾಡುವುದು ಊಟಕ್ಕೆಡೆಮಾಡುವುದು. ಶಿಶುಗಳನ್ನು ಚನ್ನಾಗಿ ಸಂರಕ್ಷಿಸುವದು ಇವೇ ಮೊದಲಾದ ಗೃಹಕೃತ್ಯಗಳನ್ನು ಮಾಡುವುದಲ್ಲದೆ ಗಂಡನ ಆಜ್ಞೆಯಂತೆ ನಡೆದುಕೊಳ್ಳುವುದು, ಪಾತಿವ್ರತ್ಯ ಧರ್ಮವನ್ನು ಕಾಯ್ದುಕೊಳ್ಳುವುದು ಇತ್ಯಾದಿ.

ಪುರುಷರ ಕರ್ತವ್ಯ:— ನೌಕರಿ, ವ್ಯಾಪಾರ, ಒಕ್ಕಲತನ ಇವೇ ಮೊದಲಾದ ಯಾವುದಾದರೊಂದು ದಂಧೆ ಮಾಡಿ ಅದರಿಂದ ಬಂದ ದುಡ್ಡಿನಿಂದ ತಮ್ಮ ಸಂಸಾರವನ್ನು ಸಾಗಿಸುವದು ಇತ್ಯಾದಿ.

ಸತಿ-ಪತಿಗಳಿಬ್ಬರೂ ಸುಶಿಕ್ಷಿತರಾಗಿದ್ದರೆ ಎಲ್ಲಕ್ಕೂ ಮೇಲು ಇವರು ಉತ್ತಮರು. ಇವರಿಬ್ಬರೊಳಗೆ ಪತಿಯಾಗಲಿ, ಸತಿಯಾಗಲಿ ಅಶಿಕ್ಷಿತರಾಗಿದ್ದರೆ ಇಂತಹ ದಂಪತಿಗಳು ·ಮಧ್ಯಮರು ಸತಿ ಪತಿಗಳಿಬ್ಬರೂ ಅಶೀಕ್ಷಿತರಾಗಿದ್ದರೆ ಇಂಥಹವರು ಕನಿಷ್ಟ ತರಗತಿಗೆ ಸೇರುವರು. ಏಕೆಂದರೆ ಸತಿ-ಪತಿಗಳಿಬ್ಬರೂ ಸುಶಿಕ್ಷಿತರಿರುವುದರಿಂದ ಪ್ರಪಂಚವು ಆತಂಕವಿಲ್ಲದೆ ನಡೆಯುವದು. ಇಬ್ಬರೊಳಗೆ ಒಬ್ಬರು ಅಶಿಕ್ಷಿತರಿದ್ದು ಒಬ್ಬರು ಸುಶಿಕ್ಷಿತರಿದ್ದರೆ ಸ್ವಲ್ಪ ಆತಂಕವಾಗುವದು. ಇಬ್ಬರೂ ಅಶಿಕ್ಷಿತರಿದ್ದರೆ ಸಂಪೂರ್ಣ ಅಡ್ಡಿ ಯಾಗುವುದು. ಜಾಣ ಜಾಣರಿಗೆ ಮೂರು ದಾರಿ ಜಾಣ ಕೋಣರಿಗೆ ಎರಡು ದಾರಿ ಕೋಣ-ಕೋಣರಿಗೆ ದಾರಿಯೇ ಇಲ್ಲವೆಂದಂತಾಗುವದು.

ಸ್ತ್ರೀಯರು ಸುಶಿಕ್ಷಿತರಾದರೆ ಜಗತ್ತು ಉನ್ನತಾವಸ್ಥೆಯನ್ನು ಹೊಂದುವದು •ಅಸಿಕ್ಷಿತರಾದರೆ ಜಗತ್ತು ಹೀನಾವಸ್ಥೆಯನ್ನು ಹೊಂದುವದು. ಈ ಎರಡು ಅವಸ್ಥೆಗಳನ್ನು ಹೊಂದಿಸಲಿಕ್ಕೆ ಸ್ತ್ರೀಯರೇ ಮುಖ್ಯ ಕಾರಣವೆಂದು ಸ್ಪಸ್ಟವಾಗುತ್ತದೆ. ಹೇಗೆಂದರೆ ಶಿಶುಗಳು ಹುಟ್ಟಿದಂದಿನಿಂದ ಮುಂದೆ ದೊಡ್ಡವರಾಗುವವರೆಗೂ ತಾಯಿಯೊಡನೆಯೇ ಕೂಡಿಕೊಂಡಿರುವುದರಿಂದ ಅವುಗಳಲ್ಲಿ ತಾಯಿಯ ಗುಣಗಳೇ ವಿಶೇಷವಾಗಿ ಅಂಕುರಿಸುತ್ತವೆ. ತಾಯಿಯ ಧರ್ಮದಂತೆ ನಡೆಯುವವಳೂ ನೀತಿವಂತಳೂ, ಸದಾಚಾರ ಸಂಪನ್ನಳೂ, ಆರೋಗ್ಯವಂತಳೂ, ಪರೋಪಕಾರನಿರತಳೂ, ಕರುಣಾಳುವೂ, ಆಗಿರಬೇಕು. ಈ ಗುಣಗಳು ಬರಬೇಕಾದರೆ ತಾಯಿಗೆ ಮೊದಲು ಸುವಿದ್ಯೆ ( ಅಂದರೆ ಒಳ್ಳೇ ವಾತಾವರಣದಲ್ಲಿ ಗಳಿಸಿದ ಜ್ಞಾನ ) ಬೇಕು. ಪುರುಷರಿಗಿಂತಲೂ ಸ್ತ್ರೀಯರಿಗೆ ಮೊದಲು ಒಳ್ಳೇ ವಿದ್ಯೆಯು ಬೇಕು. "ಸಂಸರ್ಗಜಾ ದೋಷಗುಣಾಭವಂತಿ" ಎಂಬ ವಾಕ್ಯವು ಮೇಲಿನ ವಿಷಯವನ್ನು ಸ್ಪಷ್ಟಪಡಿಸುತ್ತದೆ.

ಮತ್ತು "೩ ವರ್ಷದ ಬುದ್ಧಿ ೧೦೦ ವರ್ಷದ ವರೆಗೆ" ಎಂಬಂತೆ ಚಿಕ್ಕಂದಿನಲ್ಲಿ ತಾಯಿ ಕಲಿಸಿದ ಬುದ್ಧಿಯೇ ಮುಂದೆ ಮಗುವಿಗೆ ಬರುವುದು. ಸ್ತ್ರೀಯರು ಸುಶಿಕ್ಷಿತರಾಗುವುದರಿಂದ ಮಕ್ಕಳು ಸುಶಿಕ್ಷಿತರಾಗುತ್ತಾರೆ. ಮಕ್ಕಳು ಸುಶಿಕ್ಷಿತರಾಗುವುದರಿಂದ ಜನಾಂಗವು ಸುಧಾರಿಸುವದು. "ಸ್ತ್ರೀಯರಿಗೆ ಕಲಿಸಿದರೆ ಜನಾಂಗಕ್ಕೆ" ಕಲಿಸಿದಂತಾಗುವುದು. ಎಂಬ ವಾಕ್ಯವು ಅಕ್ಷರಶಃ ನಿಜವಿರುತ್ತದೆ. ಆದ್ದರಿಂದ ಮೊದಲು ತಾಯಿಯು ಬಹಳ ಜಾಗರೂಕಳಾಗಿರಬೇಕು. ಮತ್ತು ಪ್ರತಿಯೊಬ್ಬರೂ ಸ್ತ್ರೀಯರಿಗೆ ವಿದ್ಯೆಯನ್ನು ಮುಖ್ಯವಾಗಿ ಕಲಿಸಬೇಕು. ಇಲ್ಲಿ ಮತ್ತೊಂದು ಮಾತು ಹೇಳತಕ್ಕದ್ದೇನಂದರೆ:— ನಮ್ಮ ಭಾರತಿಯ ಸ್ತ್ರೀಯರು ಆತ್ಮೋದ್ಧಾರಕ್ಕಾಗಲೀ, ದೇಶೋದ್ಧಾರಕ್ಕಾಗಲೀ ಬೇಕಾದ ವಿದ್ಯೆಯನ್ನು ಕಲಿತು ಉತ್ತೀರ್ಣರಾಗಿ ಡಿಗ್ರಿಯನ್ನು ಪಡೆದು ಬೇಕಾದಷ್ಟು ದುಡ್ಡನ್ನು ಸಂಪಾದಿಸಬಹುದು. ಆದರೆ ಪರದೇಶದ ಸ್ತ್ರೀಯರ ಮೋಹಜಾಲಕ್ಕೊಳಗಾಗಿ ತಮ್ಮ ಧರ್ಮಕ್ಕೆ ತಿಲಾಂಜಲಿಯನ್ನು ಕೊಡಬಾರದು. ನಮ್ಮ ದೇಶದ ಉಡಿಗೆಗಳನ್ನೇ ಧರಿಸಬೇಕು, ಪಾತಿವ್ರತ್ಯ ಧರ್ಮಕ್ಕೆ ಚ್ಯುತಿಯನ್ನು ತಂದಕೊಳ್ಳಬಾರದು, ಪ್ರೌಢ ವಿವಾಹ, ವಿಧವಾವಿವಾಹ, ದಾಂಪತ್ಯ ವಿಚ್ಛೇಧನ, ಸ್ವೇಚ್ಛಾವರ್ತನ ಇವುಗಳಿಗೆ ಆಸ್ಪದ ಕೊಡಬಾರದು. ಅಭಕ್ಷ ಪದಾರ್ಥಗಳನ್ನು ಸೇವಿಸಬಾರದು. ಇವೇ ಮೊದಲಾದ ನಿಯಮಗಳನ್ನು ಪಾಲಿಸುತ್ತ ಬಂದರೆ ಬಂಗಾರದಲ್ಲಿ ಸುಗಂಧವುಂಟಾದಂತಾಗಿ ವಿದ್ಯೆಗೆ ಮತ್ತಷ್ಟು ಕಳೆಯೇರುವದು.

ಮೊದಲಿನ ಸ್ತ್ರೀಯರು ಮೈಕಾಣದ ಹಾಗೆ ದಪ್ಪನ್ನ ವಸ್ತ್ರಗಳನ್ನುಡುತ್ತಿದ್ದರು ಮೊಣಕೈವರೆಗೆ ಕುಬಸವನ್ನು ತೊಡುತ್ತಿದ್ದರು. ಎಡಕ್ಕೆ ಮೂಗನ್ನು ಚುಚ್ಚಿಕೊಳ್ಳುತ್ತಿದ್ದರು. ಈ ಪದ್ಧತಿಯು ಸ್ತ್ರೀಯರು ಇಗಲೂ ಕೆಲವರಿದ್ದಾರೆ. ಈಗಿನ ಕೆಲವು ಸ್ತ್ರೀಯರು ನಾಟಕ, ಸಿನೇಮಾ, ನೋಡಿಯಾಗಲಿ, ಇಲ್ಲವೆ ಪರದೇಶಿಯ ಸ್ತ್ರೀಯರನ್ನು ನೋಡಿಯಾಗಲಿ ಮೈಯಲ್ಲಾ ಕಾಣುವಂತೆ ಸೂಕ್ಷ್ಮ ವಸ್ತ್ರಗಳನ್ನುಡುತ್ತಿದ್ದಾರೆ. ಮೊಣಕೈವರೆಗೆ ತೊಡುತ್ತಿದ್ದ ಕುಬಸವನ್ನು ಕೆಲವು ದಿವಸ ಅರ್ಧತೋಳಿಗೆ ತೊಡುತ್ತಿದ್ದರು ಈಗ

ಅದನ್ನು ಬಿಟ್ಟು ಅರ್ಧ ತೋಳಿನ ಮೇಲೆ ಜಾಪರ ಅಂತಾ ತೊಡುತ್ತಿದ್ದಾರೆ. ಇನ್ನು ಮುಂದೆ ಗಂಡಸರು ಜಾಕೇಟು ತೊಡುವಂತೆ ಹೆಗಲ ಮೇಲೆ ಬರುವಂತೆ ತೊಡುವರೊ ಏನೋ ನೋಡಬೇಕಾಗಿದೆ, ಎಡಕ್ಕೆಸಾಲದೆ ಬಲಕ್ಕೂ ಮೂಗನ್ನು ಚುಚ್ಚಿಕೊಳ್ಳಹತ್ತಿದ್ದಾರೆ. ಇಷ್ಟಾದರೂ ಇವರಿಗೆ ತೃಪ್ತಿಯೇ ಇಲ್ಲ. ಈಗಿನ ಉಡಿಗೆ ತೊಡಿಗೆಗಳು ನಮ್ಮ ಭಾರತಿಯ ಸ್ತ್ರೀಯರಿಗೆ ಅತ್ಯಂತ ವಿರೋಧವೂ ಹೇಯವೂ ಆಗಿವೆ.

ಪ್ರಾಚೀನ ಸ್ತ್ರೀಯರು ತಮ್ಮ ಪತಿಯ ಸಂಗಡ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಆತನಿಗೆ ಎದುರು ವಾದಿಸದೆ ಸೌಮ್ಯತನದಿಂದ ನಡೆದುಕೊಳ್ಳುತ್ತಿದ್ದರು ಗಂಡನು ಹೊರಗಿನ ಕೆಲಸಗಳನ್ನು ತೀರಿಸಿಕೊಂಡು ಮನೆಗೆ ಬಂದ ಕೂಡಲೇ ನಗೆಮೋರೆಯಿಂದ ಆತನನ್ನು ಆದರಿಸುತ್ತಿದ್ದರು. ಗಂಡನು ಉಣ್ಣುವದಕ್ಕಿಂತ ಮೊದಲು ತಾವು ಎಂದೂ ಉಣ್ಣುತ್ತಿದ್ದಿಲ್ಲ. ಆತನಿಗೆ ಸೇರದ ಪದಾರ್ಥಗಳನ್ನು ಎಂದೂ ಮುಟ್ಟುತ್ತಿದ್ದಿಲ್ಲ. ಮತ್ತು ಗಂಡನೇ ದೇವರೆಂದು ತಿಳಿದು ಅವರಂತೆ ನಡೆಮುಕೊಳ್ಳುತ್ತಿದ್ದರು. ಮಾವ, ಭಾವ, ಅತ್ತೆ, ಮೈದುನ ಅತಿಥಿಗಳ ಸಂಗಡ ವಿಶ್ವಾಸದಿಂದ ವರ್ತಿಸುತ್ತಿದ್ದರು. ಪ್ರತಿಯೊಂದು ಮನೆಗೆಲಸವನ್ನು ಶಾಂತ ಮುದ್ರೆಯಿಂದಲೂ ಸ್ವಚ್ಛತೆಯಿಂದಲೂ ಮಾಡುತ್ತಿದ್ದರು.

ಈ ಕಾಲದ ಕೆಲವು ಸ್ತ್ರೀಯರು ತಮ್ಮ ಗಂಡನ ಸಂಗಡ ಭಕ್ತಿಯಿಂದ ನಡೆದುಕೊಳ್ಳದೆ ಎದುರು ವಾದಿಸುತ್ತ, ಅವನು ಹೊರಗಿನ ಕೆಲಸವನ್ನು ತೀರಿಸಿಕೊಂಡು ಮನೆಗೆ ಬಂದ ಕೂಡಲೇ ಮೋರೆಯನ್ನು ಬಿಗಿದುಕೊಂಡು ಉಪಚರಿಸುತ್ತ, ಅವನು ಊಟ ಮಾಡುವದಕ್ಕಿಂತ ಮುಂಚೆಯೇ ಊಟ ಮಾಡಿಕೊಂಡು ಕುಳಿತಿರುತ್ತ, ಆತನಿಗೆ ಬೇಡದ ಪದಾರ್ಥಗಳನ್ನು ತಿಂದು ಆತನನ್ನು ದೇವರೆಂದು ಭಾವಿಸದೆ, ಅತ್ತೆ, ಮಾವ, ಭಾವ, ಮೈದುನ ಅತಿಥಿಗಳ ಸಂಗಡ ಪ್ರೀತಿಯಿಂದ ನಡೆದುಕೊಳ್ಳದೆ, ಯಾವಾಗಲೂ ಅವರಿಗೆ ಎದುರುತ್ತರವನ್ನು ಕೊಡುತ್ತ ಸಿಟ್ಟಿನಿಂದ ಮನೆಗೆಲಸವನ್ನು ಮಾಡು

ವಂತಹವರಾಗಿದ್ದಾರೆ. ಇಂತಹ ಸ್ತ್ರೀಯರು ರಾಕ್ಷಸ ವರ್ಗಕ್ಕೆ ಸೇರಿದವರಲ್ಲದೆ ಮನುಷ್ಯ ವರ್ಗಕ್ಕೆ ಸೇರಿದವರಲ್ಲ. ಮತ್ತು ತಮ್ಮ ಪತಿಗೂ ಸತ್ಪುರುಷರಿಗೂ ಮಾನ್ಯರಾಗಲಾರರು. ಇದು ಈಗಿನ ಸುಧಾರಿಸಿದ ಸ್ತ್ರೀಯರ ಪದ್ಧತಿಯಾಗಿದೆ

ಹೇಳಿದ ಮಾತಂ ಕೇಳದೆ ।
ಸಿಳಿಗೆಯಿಂದೋಜಗೆಟ್ಟ ಹೆಂಡತಿ-ಮಕ್ಕಳ ॥
ಆಳಿಕೆ-ಬಾಳಿಕೆಗಿಂತಲು ।
ಜೋಳಾಗಿಯೆ ಮನೆಯ ಬಿಟ್ಟು ಹೋಹುದು ಲೇಸು ॥

ಅಂದರೆ ಹೇಳಿದ ಮಾತನ್ನು ಕೇಳದೆ ಹೆಮ್ಮೆಯಿಂದ ಶೋಭೆಗೆಟ್ಟ ಹೆಂಡರು-ಮಕ್ಕಳ ಇಟ್ಟುಕೊಂಡು ಸಂಸಾರ ಸಾಗಿಸುವುದಕ್ಕಿಂತ ಸನ್ಯಾಸಿಯಾಗಿ ಮನೆಯನ್ನು ಬಿಟ್ಟು ಹೋಗುವದು ಒಳ್ಳೇಯದು. ಎಂದು ಎಡವಟ್ಟ ಸ್ತ್ರೀಯರನ್ನು ಕುರಿತು ನೀತಿಕಾರನು ಈ ಪ್ರಕಾರ ಹೇಳಿದ್ದಾನೆ; ಇರಲಿ. ಸೃಷ್ಟಿಯನ್ನು ನಿರ್ಮಾಣ ಮಾಡಿದವನು ದೇವರು, ಪಂಚ ತತ್ವಗಳಲ್ಲೊಂದಾದ ಪೃಥ್ವಿ (ಭೂಮಿ)ಗೆ ಸ್ತ್ರೀಲಿಂಗದ ಹೆಸರನ್ನು ಕೊಟ್ಟಿರುತ್ತಾನೆ. ಭೂಮಿಯ ಮೇಲಿನ ಪ್ರತಿಯೊಂದು ಪ್ರಾಣಿಗಳ ಉತ್ಪತ್ತಿಗೆ ತಾಯಿಯೇ ಮೂಲವಾಗಿರುವಳು. ಬ್ರಹ್ಮ, ವಿಷ್ಣು, ಮಹೇಶ್ವರ ಈ ತ್ರಿಮೂರ್ತಿಗಳಾದರೂ ಆದಿ ಮಾಯೆಯಿಂದ ಹುಟ್ಟಿರುವರು. ಅವಳಾದರೂ ಸ್ತ್ರೀಯಲ್ಲವೆ ? ಭೂಮಿಯ ಮೇಲೆ ಹುಟ್ಟಿದ ಬಳಿಕ ವಿದ್ಯೆಯು ಬೇಕಾಗುತ್ತದೆ. ಆ ವಿದ್ಯೆಯಾದರೂ ಸ್ತ್ರೀಯಳಾದ ಸರಸ್ವತಿಯೇ, ಇದಲ್ಲದೆ ಪ್ರಪಂಚಕ್ಕೆ ದುಡ್ಡು ಮುಖ್ಯವಾಗಿ ಬೇಕು. ಅದಾದರೂ ಸ್ತ್ರೀಯಾದ ಲಕ್ಷ್ಮಿಯೇ ಕಡೆಗೆ ಸಾಯಬೇಕಾದರೆ ಮೃತ್ಯುವೆಂಬ ಸ್ತ್ರೀಯಿಂದಲೆ, ಅಂದ ಬಳಿಕ ಇಡೀ ಜಗತ್ತೆಲ್ಲಾ ಸ್ತ್ರೀಮಯವಾಗಿರುವದು. ಆದ್ದರಿಂದ ಸ್ತ್ರೀಯರನ್ನು ಉದಾಸೀನ ಮಾಡಬಾರದು; ಹಿಂಸಿಸಬಾರದು; ಶಕ್ತಿಯ ಅಂಶವೆಂದು ತಿಳಿದು ಪ್ರೀತಿಯಿಂದ ನಡೆದುಕೊಳ್ಳಬೇಕು. ನಮ್ಮ ಭಾರತಿಯ ಸ್ತ್ರೀಯರು ಸಾಧಾರಣ ಬುದ್ಧಿವಂತರೂ ಅತಿಥಿಗಳಿಗೆ ಸತ್ಕಾರ ಮಾಡುವವರೂ ಶಾಂತ ಸ್ವಭಾವದವರೂ ಒಳ್ಳೇ ಸುಶೀಲರೂ ಆಗಿರುವರು. ಮೊದಲು ಹಿಂದುಸ್ತಾನವು ಸ್ತ್ರೀ ಶಿಕ್ಷಣದ

ಬಗ್ಗೆ ಹೆಸರಾಗಿತ್ತು; ಈಗ ಹಿಂದುಳಿದಿದೆ. ಪರರಾಷ್ಟ್ರದೊಳಗಿನ ಸ್ತ್ರೀಯರೆಲ್ಲರೂ ಕಲಿತವರಿರುವುದರಿಂದ ಅಲ್ಲಿಯ ಜನಾಂಗವು ಸುಧಾರಿಸಿ ರಾಷ್ಟ್ರಗಳು ಉನ್ನತ ಸ್ಥಿತಿಗೆ ಬಂದಿವೆ. ಇಂಗ್ಲಂಡ, ಅಮೇರಿಕಾ, ಫ್ರಾನ್ಸ, ಜರ್ಮನಿ ಜಪಾನ ಮುಂತಾದ ರಾಷ್ಟ್ರಗಳೇ ಇದಕ್ಕೆ ಪ್ರಮಾಣಗಳಾಗಿವೆ; ಒಮ್ಮೆ ಫ್ರಾನ್ಸಿನ ರಾಣಿಯು ಹಿಂದುಸ್ತಾನದೊಳಗಿನ ಜನರಿಗೆಲ್ಲ ನೀವು ಕುರಿಗಳಂತೆ ಇರುವಿರೆಂದು ಅಂದಿದ್ದಾಳೆ.

ಹಿಂದುಸ್ತಾನದ ಪುರುಷರು ಸ್ತ್ರೀಯರಿಗೆ ವಿದ್ಯೆಯನ್ನು ಕಲಿಸುವುದರಿಂದ ಅವರು ಪ್ರವೀಣರಾದರೆ ಅವರು ಮಾಡತಕ್ಕ ಕಾರ್ಯವನ್ನು ನಾವು ಮಾಡಬೇಕಾದೀತೆಂಬ ಭಯದಿಂದ ವಿದ್ಯೆ ಕಲಿಸುವುದನ್ನು ಬಿಟ್ಟಂತೆ ಕಂಡುಬರುತ್ತದೆ; ಇದು ಬಹಳ ತಪ್ಪು. ಹೀಗಾಗಿಯೇ ನಮ್ಮ ದೇಶವು ಇಷ್ಟು ಹಿಂದುಳಿದಿದೆ. ಆದ್ದರಿಂದ ಪ್ರತಿಯೊಬ್ಬರು ತಮ್ಮ ತಮ್ಮ ಮಕ್ಕಳಿಗೆ ವಿದ್ಯೆಯನ್ನು ಕಲಿಸಿ ಅದನ್ನು ಒಳ್ಳೇ ಮಾರ್ಗದಲ್ಲಿ ಉಪಯೋಗಿಸಿಕೊಳ್ಳುವುದನ್ನು ಕಲಿಸಿ ಅದರ ಲಾಭವನ್ನು ಹೊಂದಲೆಂದು ಕೋರುತ್ತೇನೆ.



೩

# ಪಾತಿವ್ರತ್ಯ



ನಮ್ಮ ಭಾರತದ ಮಹಿಳೆಯರಿಗೆ ಸರ್ವಧರ್ಮಗಳಲ್ಲಿ ಪಾತಿವ್ರತ್ಯ ಧರ್ಮವೆಂಬುದೊಂದೇ ಮುಖ್ಯ ಧರ್ಮವಾಗಿರುತ್ತದೆ. ಈ ಪಾತಿವ್ರತ್ಯವೆಂಬ ಧರ್ಮವನ್ನು ಯಾವ ಸ್ತ್ರೀಯಳು ತ್ರಿಕರಣ ಶುದ್ಧಿಯಿಂದ ಪಾಲಿಸುತ್ತಾಳೆಯೋ ಅವಳೇ ಕುಲಸ್ತ್ರೀಯಳೆನಿಸುತ್ತಾಳೆ. ಸ್ತ್ರೀಯರನ್ನು ಉನ್ನತಾವಸ್ಥೆಗೆ ತರುವ ಪತಿಧರ್ಮಪರಾಯಣತೆ ಎಂಬ ಧರ್ಮವು ಯಾವಳಲ್ಲಿ ಶೈಥಿಲ್ಯ ಹೊಂದಿರುವುದೋ ಅವಳಲ್ಲಿ ಇತರ ಧರ್ಮಗಳೆಷ್ಟಿದ್ದರೂ ಅವು ಪ್ರಕಾಶ ಹೊಂದಲಾರವು. ಈ ಪಾತಿವ್ರತ್ಯವೆಂಬ ಧರ್ಮ ಒಂದಿದ್ದು ಇತರ ಧರ್ಮಗಳಿಲ್ಲದಿದ್ದರೂ ಅವಳು ಸ್ತುತ್ಯಳೂ ಈಶ್ವರ ಪ್ರೀಯಳೂ ಆಗುತ್ತಾಳೆ. ಇನ್ನು ಸೌಶೀಲ್ಯಾದಿ ಇತರ ಧರ್ಮಗಳಿಂದೊಡಗೂಡಿದ ಈ ಪಾತಿವ್ರತ್ಯ ಧರ್ಮವು ನಕ್ಷತ್ರಮಾಲೆಯಿಂದೊಡಗೂಡಿದ ಚಂದ್ರನಂತೆ ಪರಿಶೋಭಿಸುವುದು; ಲೋಕದಲ್ಲಿ ಪುರುಷರು ಪರಿಶುದ್ಧಾತ್ಮರಾಗಿ ಅದ್ಭುತ ಶಕ್ತಿಯನ್ನು ಪಡೆಯಬೇಕಾದರೆ ಅನೇಕ ವಿಧವಾದ ಕರ್ಮೋಪಾಸನೆಯನ್ನೂ ಯಮನಿಯಮಾದಿ ತಪಸ್ಸನ್ನೂ ಮಾಡಬೇಕಾಗುತ್ತದೆ. ಸ್ತ್ರೀಯರು ಮಾತ್ರ ಇಂಥ ಕಠಿಣತರವಾದ ಯಾವದೊಂದು ಉಪಾಸನೆಯನ್ನಾಗಲೀ ಕೃಚ್ಛ್ರಚಾಂದ್ರಾಯಣಾದಿ ತಪಸ್ಸನ್ನಾಗಲಿ ಮಾಡಬೇಕಾಗಿಲ್ಲ. ಪತಿಯ ಗುಣಾವಗುಣಗಳನ್ನು ಅವಲೋಕಿಸದೆ ತ್ರಿಕರಣ ಶುದ್ಧಿಯಿಂದ ಪತಿ ಸೇವಾನಿರತಳಾಗಿ ತನ್ನ ಪಾತಿವ್ರತ್ಯವೆಂಬ ಅಮೋಘವಾದ ರತ್ನವೊಂದನ್ನು ರಕ್ಷಿಸಿಕೊಂಡು ಬಂದರೆ ಸಾಕು. ಋಷಿಗಳು ಅನ್ನ ಆಹಾರಾದಿಗಳನ್ನು ತ್ಯಜಿಸಿ ಕೇವಲ ವಾಯ್ವಾಹಾರ ಜಲಾಹಾರಾದಿಗಳಲ್ಲಿದ್ದು

ಮಹಾತಪಸ್ಸಿದ್ಧಿಯನ್ನು ಪಡೆಯುವಂತೆ ಪಾತಿವ್ರತ್ಯವೆಂಬ ಒಂದೇ ಒಂದು ಮಹಾತಪಸ್ಸಿನಿಂದಲೇ ಸ್ತ್ರೀಯರ ಹೃದಯದಲ್ಲಿ ಒಂದು ವಿಧವಾದ ಅದ್ಭುತ ಶಕ್ತಿಯು ಒಡಮೂಡುವದು. "ಸತಿಗೆ ಪಾತಿವ್ರತ್ಯವೇ ಭೂಷಣಂ" ಎಂಬ ನೀತಿವಾಕ್ಯದಂತೆ ಭಾರತ ಸ್ತ್ರೀಯರಿಗೆ ಪಾತಿವ್ರತ್ಯಕ್ಕಿಂತಲೂ ಇನ್ನೊಂದು ಶ್ರೇಷ್ಠ ಧರ್ಮವಿಲ್ಲವು. ಕುಲಸ್ತ್ರೀಯರಿಗೆ ಪಾತಿವ್ರತ್ಯವೇ ಅಮೋಘವಾದ ಆಭರಣವು. ಲೋಕದಲ್ಲಿ ಪಾತಿವ್ರತ್ಯಾನುಷ್ಠಾನಕ್ಕಿಂತಲೂ ಇನ್ನೊಂದು ಕ್ಲೇಶತರವಾದ ತಪಸ್ಸಿಲ್ಲ. ನಿಯಮಗಳಲ್ಲೆಲ್ಲಾ ಪಾತಿವ್ರತ್ಯ ನಿಯಮವೇ ಘನತರವಾದುದು. ಇಂಥ ಪತಿ-ಧರ್ಮಪರಾಯಣೆಯರಾದ ಸ್ತ್ರೀಯರ ಹೃದಯದಲ್ಲಿ ಪತಿವ್ರತಾ ದೇವತೆಯಾದ ಪಾರ್ವತಿಯು ಸದಾ ಸನ್ನಿಹಿತಳಾಗಿ ಶಾಪಾನುಗ್ರಹ ಶಕ್ತಿಯನ್ನುಂಟು ಮಾಡುವಳು. ಇಹಪರ ಸುಖಸಾಧಕವಾದ ಇಂತಹ ಪಾತಿವ್ರತ್ಯವೆಂಬ ಧನವನ್ನು ಯಾವ ಸ್ತ್ರೀಯಳು ಕಳೆದುಕೊಳ್ಳುತ್ತಾಳೆಯೋ ಅಂತಹ ಸ್ತ್ರೀಯಳು ಶೂರ್ಪನಖಿ ಮುಂತಾದ ಮಹಾ ರಾಕ್ಷಸಿಯರಂತೆ ವಂಶಚ್ಛೇದಕಳಾಗುತ್ತಾಳೆ.

ಸ್ತ್ರೀಯರು ಯಾವಾಗ ದುಷ್ಟವೃತ್ತಿಯನ್ನು ಅವಲಂಬಿಸುತ್ತಾರೆಯೋ ಆಗ ವರ್ಣಾಶ್ರಮ ಧರ್ಮಗಳ ಸಾಂಕರ್ಯವಾಗಿ ಹಾಳುಬಿದ್ದ ಕ್ಷೇತ್ರದಂತೆ ಅವರ ಮಂಗಲಮಯವಾದ ಸೌಭಾಗ್ಯವೇ ನಷ್ಟವಾಗುವದು. ಎಂದು ಗೀತಾಕಾರರೂ ಸಹ ಹೇಳಿದ್ದಾರೆ.

ಲೋಕೇಷು ನಿರ್ಧನೋ ದುಃಖೀ ಋಣಗ್ರಸ್ತಸ್ತತೋಽಧಿಕಂ ।
ತಾಭ್ಯಾಂ ದುಃಖೀತು ರೋಗೀ ಚತೇಭ್ಯೋ ದುಃಖೀ ಕುಭಾರ್ಯಕಃ ॥

ಅಂದರೆ ಜನರಲ್ಲಿ ದಾರಿದ್ರ್ಯಾವಸ್ಥೆಯಲ್ಲಿ ಇರತಕ್ಕವನು ದುಃಖಿಯು ಇವನಿಗಿಂತ ಸಾಲವನ್ನು ಮಾಡಿರತಕ್ಕವನು ಇನ್ನೂ ದುಃಖಿಯು, ಇವನಿಗಿಂತ ರೋಗವಿರತಕ್ಕವನು ಮತ್ತೂ ದುಃಖಿಯು, ಇವರೆಲ್ಲರಿಗಿಂತ ದುಷ್ಟ ಹೆಂಡತಿ ಇರತಕ್ಕವನಿಗೆ ಸಮಾನವಾದ ದುಃಖಿಯು ಪ್ರಪಂಚದಲ್ಲಿಲ್ಲ. ಎಂದು ಈ ಶ್ಲೋಕವಾದರೂ ಸ್ತ್ರೀಯರ ದುರ್ವರ್ತನೆಯನ್ನು ಧಿಕ್ಕರಿಸುತ್ತದೆ.

ನಮ್ಮ ಭಾರತಭೂಮಿಯು ಕರ್ಮಭೂಮಿಯೆಂದೆನಿಸಿಕೊಂಡಿದೆ. ಕರ್ಮಾಧಿಕಾರವೆಂಬುವದು ಸತೀಸಾನ್ನಿಧ್ಯವಿದ್ದವನಿಗಲ್ಲದೆ ಇತರರಿಗೆ ಸಂಪೂರ್ಣ ದೊರೆಯಲಾರದು. ಆದ್ದರಿಂದಲೇ ನಮ್ಮ ಹಿಂದಿನ ಋಷಿಗಳು ಸತಿಯರನ್ನು ಧರ್ಮಪತ್ನಿಯರೆಂಪೇ ಕರೆದಿರುತ್ತಾರೆ. ನಮ್ಮ ಭಾರತ ಧರ್ಮಮಂದಿರವು ಪಾತಿವ್ರತ್ಯವೆಂಬ ತಳಹದಿಯ ಮೇಲೆ ನಿಂತಿರುತ್ತದೆಂದು ಹೇಳಿದರೆ ಅತಿಶಯೋಕ್ತಿಯೆನಿಸಲಾರದು. ತಳಹದಿಯು ಎಲ್ಲಿಯ ವರೆಗೆ ಭದ್ರವಾಗಿರುತ್ತದೆಯೋ ಅದು ವರೆಗೂ ಮೇಲಣ ಕಟ್ಟಡವು ಅಂದವಾಗಿಯೇ ಇರುತ್ತದಲ್ಲವೆ ?

ರೋಗ ರುಜೆಗಳುಂಟಾದರೆ ಸಂಜೀವ ನೌಷಧಿಯಂತೆ ಅನುಕೂಲಳಾಗಿಯೂ, ವಿನೋದ ಕಾಲದಲ್ಲಿ ಸ್ನೇಹಿತಳಾಗಿಯೂ, ಯಜ್ಞಸಮಯದಲ್ಲಿ ಧರ್ಮಪತ್ನಿ ಸ್ವರೂಪಿಣಿಯಾಗಿಯೂ, ಶತ್ರುಗಳು ಯುದ್ಧಕ್ಕೆ ಬಂದ ಸಮಯದಲ್ಲಿ ಖಡ್ಗಧಾರಿಣಿಯಾದ ಮಹಾ ವೀರಳಾಗಿಯೂ, ಗುರುದೇವರ ಪೂಜಾ ಸಮಯದಲ್ಲಿ ಭೃತ್ಯಳಾಗಿಯೂ, ವ್ಯಥೆವುಂಟಾದ ಕಾಲದಲ್ಲಿ ಬಂಧುವಾಗಿಯೂ ಹೀಗೆ ಒಬ್ಬಳೇ ಅನಂತ ರೂಪವನ್ನು ಧರಿಸುತ್ತ ಪ್ರತಿಯೊಬ್ಬ ಸ್ತ್ರೀಯು ತನ್ನ ಪತಿಗೆ ಪ್ರತಿಯೊಂದು ಕಾರ್ಯದಲ್ಲಿ ಅನುಕೂಲಳಾಗಿ ವರ್ತಿಸಬೇಕು. ಹೀಗೆ ವರ್ತಿಸುವುದೇ ಕುಲಸ್ತ್ರೀಯರ ಮುಖ್ಯ ಲಕ್ಷಣ.

ಭೋಜರಾಜನ ಕಾಲದಲ್ಲಿ ಒಬ್ಬ ಬ್ರಾಹ್ಮಣನು ತನ್ನ ಮನೆಯಲ್ಲಿ ಪತಿವ್ರತಾ ಶಿರೋಮಣಿಯಾದ ತನ್ನ ಹೆಂಡತಿಯ ತೊಡೆಯ ಮೇಲೆ ನಿದ್ರೆ ಮಾಡುತ್ತಿರಲು ಆಕೆಯ ಶಿಸುವು ಮಧ್ಯರಾತ್ರಿಯಲ್ಲಿ ಎಚ್ಚರಗೊಂಡು ಸಮೀಪವಲ್ಲಿ ಧಗಧಗಿಸುತ್ತಿರುವ ಅಗ್ನಿಕುಂಡದ ಬಳಿಗೆ ಹೋಗಿ ಕುಂಡದಲ್ಲಿ ಬೀಳ ಹತ್ತಿತು. ಆಗ ಅದನ್ನು ನೋಡಿ ಎದ್ದು ಹೋಗಿ ಆ ಮಗುವನ್ನು ತೆಗೆದುಕೊಂಡು ಬರಬೇಕೆಂಬ ಇಚ್ಛೆಯಿದ್ದರೂ ಪತಿಗೆ ನಿದ್ರಾಭಂಗವುಂಟಾಗುವುದೆಂಬ ಭೀತಿಯಿಂದ ಪತಿಧರ್ಮಪರಾಯಣಳಾದ ಆ ಧರ್ಮಪತ್ನಿಯು ಮೇಲಕ್ಕೆದ್ದು ಹೋಗದೆ ಇದ್ದೆಡೆಯಲ್ಲಿಯೇ ಆ ಯಜ್ಞೇಶ್ವರನನ್ನು ಪ್ರಾರ್ಥಿ

ಸಿದಳು. ಅಷ್ಟರಲ್ಲಿ ಆ ಮಗುವು ಬೆಂಕಿಯಲ್ಲಿ ಉರುಳಿತು. ಆದರೂ ಆಕೆಯ ಪಾತಿವ್ರತ್ಯ ಧರ್ಮಕ್ಕೆ ಯಜ್ಞೇಶ್ವರನು ಪ್ರಸನ್ನನಾಗಿ ತನ್ನ ಉಷ್ಣಭಾವ ವನ್ನು ಬಿಟ್ಟು ಶೀತ ಭಾವವನ್ನು ಅಂಗೀಕರಿಸಿದನು. ಮಗುವು ಸ್ವಲ್ಪವೂ ದುಃಖಗೊಳ್ಳದೆ ಹಸನ್ಮುಖವಾಗಿ ಯಜ್ಞಕುಂಡದಲ್ಲಿ ಆಡುತ್ತಲೇ ಇತ್ತು. ಅಷ್ಟರಲ್ಲಿಯೇ ಪತಿಯು ಎಚ್ಚರಗೊಂಡನು. ಗಾಬರಿಯಿಂದ ಆಕೆಯು ಎದ್ದು ಹೋಗಿ ಮಗುವನ್ನು ಎತ್ತಿಕೊಂಡಳು. ನೋಡಿದಿರಾ ಪಾತಿವ್ರತ್ಯದ ಪ್ರಭಾ ವವನ್ನು ?

ಪತಿಯು ಕುಂಟನಾಗಲಿ, ಕುರುಡನಾಗಲಿ, ಮೂರ್ಖನಾಗಲಿ, ಪಂಡಿ ತನಾಗಲಿ, ರೂಪಿಯಾಗಲಿ, ಕುರೂಪಿಯಾಗಲಿ ದೈವಾನುಸಾರವಾಗಿ ದೊರೆತ ತಮ್ಮ ಪತಿಸೇವೆಯಲ್ಲಿಯೇ ಆಸಕ್ತರಾಗುತ್ತ ಹಿಂದಣ ಸೀತಾ, ದ್ರೌಪದಿ, ದಮಯಂತಿ; ಸಾವಿತ್ರಿ, ಚಂದ್ರಮತಿ ಮುಂತಾದ ಮಹಾಪತಿವ್ರತಾ ಶಿರೋ ಮಣಿಗಳ ಮಧ್ಯದಲ್ಲಿ ಪರಿಗಣಿಸಲ್ಪಡುವುದೇ ನಮ್ಮ ಭಾರತದ ಕುಲಸ್ತ್ರೀ ಯರುಗಳ ಧರ್ಮವಾಗಿದೆ. ಈಗಿನ ವಿದೇಶೀಯ ಸಂಸರ್ಗದ ಗಾಳಿಗೆ ಮೈ ಯೊಡ್ಡಿ ಪಾತಿವ್ರತ್ಯಕ್ಕೆ ಭಂಗವನ್ನುಂಟು ಮಾಡತಕ್ಕ ಪ್ರೌಢವಿವಾಹ, ವಿಧ ವಾ ವಿವಾಹ ಧರ್ಮ ವಿರುದ್ಧವಾದ ಸ್ತ್ರೀ ಸ್ವಾತಂತ್ರ್ಯ ಮೊದಲಾದವುಗಳ ಮತ್ತು ಸಧ್ಯಃ ಅಮಲಿನಲ್ಲಿ ತರಬೇಕೆಂದು ಆತುರ ಪಡುತ್ತಿರುವ ವಿವಾಹ ವಿಚ್ಛೇದನದ ಬಲೆಗೆ ಸಿಕ್ಕು ತಮ್ಮ ಅದ್ಭುತ ಶಕ್ತಿಯುಳ್ಳ ಪಾತಿವ್ರತ್ಯಕ್ಕೆ ಂದನ್ನು ತಂದುಕೊಳ್ಳುವದು ಯಾರಿಗೂ ಭೂಷಣವಲ್ಲವು. ಕುಲಸ್ತ್ರೀಯ ರು ಪಾತಿವ್ರತ್ಯ ರಕ್ಷಣಾರ್ಥವಾಗಿ ಬೇಕಾದ ವಿದ್ಯೆಗಳನ್ನು ಕಲಿತು ಸಂಸಾರ ರಥವನ್ನು ನಡೆಸುವಷ್ಟು ಸ್ವಾತಂತ್ರ್ಯ ಪ್ರೇಮಿಗಳಾಗಿ ಆರ್ಯ ಧರ್ಮವನ್ನು ಕಾಪಾಡಬೇಕು. ಇಹಲೋಕ ಸುಖಕ್ಕೆ ಕಂಟಕವೂ, ಪರಲೋಕ ಸುಖಕ್ಕೆ ಪ್ರತಿಬಂಧಕವೂ, ನರಕಕ್ಕೆ ಹೇತುವೂ, ಸನಾತನ ಧರ್ಮ ವಿರುದ್ಧವೂ

ಆದ ಈ ವಿವಾಹವಿಚ್ಛೇದದ * ಕಾಯಿದೆಯನ್ನು ಪವಿತ್ರ ಭಾರತ ಮಹಿಳೆಯರೂ ಮತ್ತು ಪುರುಷರೂ ಒಪ್ಪುವುದಾದರೆ ಪುಷ್ಪವೆಂದು ಭ್ರಮಿಸಿ ದೀಪಕ್ಕೆರಗಿದ ಪತಂಗದಂತೆ ಶೀಘ್ರ ನಾಶೋನ್ಮುಖರಾಗುವಲ್ಲಿ ಸಂದೇಹವೇನೂ ಇರುವುದಿಲ್ಲ. ತಾವು ಮಾಡುವ ದೋಷವನ್ನೆಣಿಸದೆ ಸರ್ವ ಕಾರ್ಯಗಳಲ್ಲಿ ಯಾರಿಗೂ ಯಾವಾಗಲೂ ಆತಂಕಗಳನ್ನು ಮಾಡದ ಧರ್ಮಶಾಸ್ತ್ರವನ್ನು ಬದಿಗಿರಿಸಿ ತಮ್ಮ ಅಧಿಕಾರಬಲ ಬುದ್ಧಿಬಲಗಳನ್ನು ಪವಿತ್ರವಾದ ಧರ್ಮದ ಮೇಲೆ ಉಪಯೋಗಿಸುತ್ತ ಸನಾತನ ಧರ್ಮವನ್ನು ಹಾಳುಮಾಡುವದು ರಾಷ್ಟ್ರದ ಮುಖಂಡರುಗಳಿಗೆ ತಿಲಮಾತ್ರವಾದರೂ ಯೋಗ್ಯವೆನಿಸಲಾರದು.

ದುರ್ಬಲವಾದ ವಸ್ತುವನ್ನು ನಾಶಮಾಡಬೇಕೆಂದು ಬಲವಾದ ವಸ್ತುವು ತನ್ನ ಅದ್ಭುತ ಶಕ್ತಿಯನ್ನು ಅದರ ಮೇಲೆ ಪ್ರಯೋಗಿಸಿದರೂ ಅದು ಎಂದೂ ನಾಶವಾಗಲಾರದು. ಉದಾಹರಣಾರ್ಥವಾಗಿ–ಗರಿಕೆ(ಕರಿಕೆ)ಯು ಯಾವಾಗಲೂ ಅನೇಕ ಪ್ರಾಣಿಗಳ ತುಳಿತದಿಂದ ಪುಡಿ–ಪುಡಿಯಾದರೂ, ಅಗ್ನಿಕಣಗಳಿಂತಿರುವ ಸೂರ್ಯನ ಕಿರಣಗಳಿಂದ ಬೆಂದುಹೋದರೂ ಮೇಕೆ ಮೊದಲಾದವುಗಳಿಂದ ಯಾವಾಗಲೂ ತಿನ್ನಲ್ಪಟ್ಟರೂ, ಗುದ್ದಗಲಿಳಿಂದ ಅಗೆದು ಸ್ವಚ್ಛಮಾಡಲ್ಪಟ್ಟರೂ, ಕೃಶವಾದರೂ ಸಹ ಎಂದೂ ನಾಶವಾಗುವುದಿಲ್ಲ. ಏಕೆಂದರೆ ದುರ್ಬಲವಾದ ವಸ್ತುವಿನಲ್ಲಿ ಯಾವಾಗಲೂ ದೇವರ ದಯೆ ಇರುತ್ತದೆ ದೇವ ಶಕ್ತಿಯ ಮುಂದೆ ಮಾನವ ಶಕ್ತಿಯು ಎಷ್ಟೂ ನಡೆಯಲಾರದು. ಇದನ್ನು ಸರ್ವರೂ ನೆನಸಿನಲ್ಲಿಡತಕ್ಕದ್ದು.

ಕಲಿಕಾಲದ ಮಹಿಮೆಯಿಂದ ಸನಾತನವಾದ ಹಿಂದೂ ಧರ್ಮಕ್ಕೆ ಅವನತಿಯು ಬರುತ್ತಿರುವದೇನೋ ನಿಜ. ಆದರೂ ಸರ್ವೇಶ್ವರನ ಆಜ್ಞೆಯಂತೆ

---

* ಹಿಂದುಗಳ ವಿವಾಹ ಹಾಗೂ ವಿವಾಹವಿಚ್ಛೇದನಕ್ಕೆ ಸಂಬಂಧಿಸಿದ ೧೯೫೫ ರ ಹಿಂದೂ ವಿವಾಹ ಕಾನೂನು ೧೯೫೫ ಮೇ ೧೮ ರಂದು ಶಾಸನವಾಗಿ ಪರಿಣಮಿಸಿತು. ಆದುದರಿಂದ ಈ ಕಾಯಿದೆಯನ್ನು ಯಾರೂ ಅತಿಕ್ರಮಿಸಬಾರದು. ಅರ್ಥಾತ್ ಮೀರಬಾರದು.

ಸ್ತ್ರೀಯರೆಲ್ಲರೂ ಮಹಾ ಬಲಯುತವಾದ ಪಾತಿವ್ರತ್ಯವನ್ನು ಕಾಯ್ದು ಕೊಂಡು ಮುಂದೆ ಬರುತ್ತಿರುವ ಅಧರ್ಮದ ಕಾನೂನುಗಳನ್ನು ನಿಷೇಧಿಸಿ ಇಹಪರ ಸೌಖ್ಯವನ್ನು ಪಡೆಯಬೇಕೆಂದು ಆಗ್ರಹದಿಂದ ಸೂಚಿಸಬಯಸುತ್ತೇವೆ.



೪

# ಗರ್ಭಿಣಿಯರು ಆಚರಿಸತಕ್ಕ ಮುಖ್ಯ ನಿಯಮಗಳು



**ಗರ್ಭಿಣಿಯರ ದೇಹಾರೋಗ್ಯ ರಕ್ಷಣೆ:—** ಸ್ತ್ರೀಯಳು ಗರ್ಭವತಿಯಾಗಿರುವಾಗ ತನಗೆ ಸುಖ ಪ್ರಸವವಾಗಿ ಹುಟ್ಟುವ ಶಿಶುವು ಅಂದವಾಗಿಯೂ, ಆರೋಗ್ಯವುಳ್ಳದಾಗಿಯೂ ಇರಬೇಕಾದರೆ ಅವಳು ತನ್ನ ಗರ್ಭಕಾಲದ ಒಂಭತ್ತು ತಿಂಗಳೂ ತನ್ನ ದೇಹಾರೋಗ್ಯವನ್ನು ಸರಿಯಾಗಿ ಕಾಪಾಡಿಕೊಳ್ಳುವ ವಿಷಯದಲ್ಲಿ ಬಹಳ ಎಚ್ಚರದಿಂದಿರಬೇಕು. ಪ್ರಸವವೆಂಬುದು ಸ್ತ್ರೀಯರಿಗೆ ಸಹಜವಾದ ದೇಹವ್ಯಾಪಾರವೇ ಹೊರತು ಅದೊಂದು ಗಂಡ ಕಾಲವಲ್ಲ! ಸರಿಯಾದ ರೀತಿಯಲ್ಲಿ ನಡೆದುಕೊಳ್ಳುವ ಗರ್ಭಿಣಿಯು ಹೆರಿಗೆಗಾಗಿ ಸ್ವಲ್ಪವೂ ಹೆದರಬೇಕಾದುದಿಲ್ಲ. ಆರೋಗ್ಯದಿಂದಿರುವ ಸ್ತ್ರೀಯಳು ಗರ್ಭವಶೆಯಲ್ಲಿ ತನ್ನ ಮೊದಲಿನ ಜೀವನಕ್ರಮವನ್ನು ಯಾವ ವಿಧದಲ್ಲಿಯೂ ಬದಲಾಯಿಸಬೇಕಾಗಿಲ್ಲ. ಗರ್ಭ ಚಿಹ್ನವು ಕಂಡೊಡನೆ ಕೆಲವು ಸ್ತ್ರೀಯರು ಸಣ್ಣಮಕ್ಕಳಂತೆ ಉಪಚರಿಸಲ್ಪಡುವರು; ಇದು ಅನಾವಶ್ಯಕ. ಆಹಾರ, ಉಡಿಗೆ, ವಿಶ್ರಾಂತಿ, ಶುದ್ಧವಾದ ಗಾಳಿ, ಸ್ವಚ್ಛವಾದ ನೀರು, ಮಲಶುದ್ಧಿ ಆಚಾರ ವಿಚಾರ ಇವಿಷ್ಟೂ ಗರ್ಭಿಣಿಯರು ಮುಖ್ಯವಾಗಿ ಗಮನಿಸಬೇಕಾದ ವಿಷಯಗಳು.

**ಗರ್ಭಿಣಿಯರ ಆಹಾರ:—** ಗರ್ಭಿಣಿಯರ ಆಹಾರವು ಲಘುವಾಗಿಯೂ ಪುಷ್ಟಿಕರವಾಗಿಯೂ ಇರಬೇಕು ಅವರು ಅಪೇಕ್ಷಿಸತಕ್ಕ ಆಹಾರವನ್ನು ಸ್ವಲ್ಪಮಟ್ಟಿಗೆ ಮಿತವಾಗಿ ಕೊಟ್ಟು ತೃಪ್ತಿಗೊಳಿಸಬಹುದು. ಆದರೆ ಶಿಶುಜನನಕ್ಕೆ ಮೊದಲು ತಾಯಿಯ ರಕ್ತದಿಂದಲೇ ಗರ್ಭದಲ್ಲಿರುವ

ಮಗುವಿಗೆ ಪುಷ್ಟಿಯೂ, ಬೆಳವಣಿಗೆಯೂ ಉಂಟಾಗಬೇಕಾಗಿದೆ. ಗರ್ಭಿಣಿಯ ಆಹಾರ ವಿಷಯದಲ್ಲಿ ಅಥವಾ ಪೋಷಣೆಯ ವಿಷಯದಲ್ಲಿ ನ್ಯೂನತೆಯಿದ್ದರೆ, ಅದರಿಂದ ಮಗುವಿನ ಬೆಳವಣಿಗೆಗೆ ಲೋಪವುಂಟಾಗುವದು. ಆದರೆ ಗರ್ಭಿಣಿಯ ರಲ್ಲಿ ಕಾಣುವ ವಿಲಕ್ಷಣವಾದ ಆಹಾರದ ಬಯಕೆಗಳನ್ನು ಮಾತ್ರ ತೃಪ್ತಿಪಡಿಸಲು ಪ್ರಯತ್ನಿಸಬಾರದು. ಚಹಾ, ಕಾಫಿಯನ್ನೂ ಎಣ್ಣೆಯಲ್ಲಿ ಕರಿದ ಕಾರದ ಪದಾರ್ಥಗಳನ್ನೂ, ಹೆಚ್ಚು ಹುಳಿಯನ್ನೂ, ಉಪ್ಪಿನಕಾಯಿಗಳನ್ನೂ ಸಾಧ್ಯವಾದ ಮಟ್ಟಿಗೆ ತಪ್ಪಿಸಬೇಕು. ಶುದ್ಧವಾದ ಹಾಲನ್ನು ಧಾರಳವಾಗಿ ಕೊಡಬಹುದು. ಕ್ರಮವಾದ ಮಲಶುದ್ಧಿಗಾಗಿ ಪ್ರತಿದಿನದ ಆಹಾರದೊಡನೆ ಹಣ್ಣುಗಳನ್ನೂ ಬೇಯಿಸಿದ ಸೊಪ್ಪಿನ ಪಲ್ಲೆಗಳನ್ನೂ ಕೊಡುತ್ತಿರಬೇಕು. ಮಲವು ಬಂಧಿಸಲು ಅವಕಾಶ ಕೊಟ್ಟರೆ, ಗರ್ಭಿಣಿಯರ ಆರೋಗ್ಯವು ಕೆಡುವುದಲ್ಲದೆ ಪ್ರಸವಕಾಲದಲ್ಲಿಯೂ ಕಷ್ಟವಾಗುವುದು. ಗರ್ಭವು ಬಲಿಯುತ್ತ ಬಂದಹಾಗೆಲ್ಲ ಆಹಾರದ ಪ್ರಮಾಣವನ್ನು ತಗ್ಗಿಸಿ, ಆಗಾಗ ಸ್ವಲ್ಪ ಸ್ವಲ್ಪ ಆಹಾರವನ್ನು ಸೇವಿಸಬೇಕು. ಸರಿಯಾಗಿ ಮಲನಿವೃತ್ತಿಯಾಗದಿದ್ದರೆ, ರಾತ್ರಿ ಮಲಗುವಾಗ ಎರಡರಿಂದ ನಾಲ್ಕು ಟೀ ಸ್ಪೂನಿನಲ್ಲಿ ಹರಳೆಣ್ಣೆ (ಔಡಲೆಣ್ಣೆ)ಯನ್ನು ಕುಡಿದು ಮಲಗಬೇಕು. ಎಣ್ಣೆಯನ್ನು ಕುಡಿಯುವುದು ಕಷ್ಟವಾಗಿ ತೋರಿದರೆ, ರಾತ್ರಿ ಮಲಗುವಾಗ ಒಂದು ಟೀ ಸ್ಪೂನಿನಷ್ಟು "ಅತಿಮಧುರದ ಚೂರ್ಣ"ವನ್ನು ಹಾಲಿನಲ್ಲಿ ಹಾಕಿ ಕುಡಿಯಬೇಕು. ಇದು ಮೈಗೆ ಸರಿಬೀಳದಿದ್ದರೆ ಡಾಕ್ಟರನ್ನು ಕೇಳಿ ಚಿಕಿತ್ಸೆ ಮಾಡಿಸಬೇಕು.

**ಗರ್ಭಿಣಿಯರ ಆರೋಗ್ಯ:—** ಇಂಡಿಯಾ ದೇಶದ ವಾಯುಗುಣವನ್ನೂ, ಈ ದೇಶದ ಸ್ತ್ರೀಯರ ಈಗಿನ ಉಡುಗೆಯ ರೀತಿಗಳನ್ನೂ ನೋಡಿದರೆ, ಇದು ಇಲ್ಲಿಗೆ ಅನುಗುಣವಾಗಿರುವುದೇ ಹೊರತು, ಈ ವಿಷಯದಲ್ಲಿ ಗರ್ಭಿಣಿಯರಿಗಾಗಿ ಪ್ರತ್ಯೇಕವಾಗಿ ಸೂಚಿಸತಕ್ಕ ವಿಧಿಗಳೇನೂ ಕಾಣುವುದಿಲ್ಲ. ಸಾಮಾನ್ಯವಾಗಿ ಇಲ್ಲಿಯ ಸ್ತ್ರೀಯರ ಉಡುಗೆಗಳ ರೀತಿಯು ಹಗುರವಾಗಿಯೂ, ಸಡಿಲವಾಗಿಯೂ ಇರುವುದರಿಂದ ದೇಹದ ಎಲ್ಲಾ ಅವ

ಯವಗಳಿಗೂ ಧಾರಳವಾಗಿ, ರಕ್ತಸಂಚಾರಕ್ಕೆ ಏನೂ ಅಡ್ಡಿಯಾಗುವ ಹಾಗಿಲ್ಲ. ಇಲ್ಲಿ ಮುಖ್ಯವಾಗಿ ಗರ್ಭಿಣಿಯರು ಗಮನಿಸಬೇಕಾದ ಅಂಶವೇನಂದರೆ, ಗರ್ಭವುಳ್ಳ ಹೆಂಗಸರು ಶಿತೋಷ್ಣಗಳ ಬದಲಾವಣೆಗೆ ಮೈ ಬಿಡಬಾರದು. ಮುಖ್ಯವಾಗಿ ಎದೆ ಮತ್ತು ಹೊಟ್ಟೆ ಇವುಗಳನ್ನು ಗಾಳಿಗೆ ತೆರೆಯದೆ ಹೊದ್ದುಕೊಂಡಿರಬೇಕು. ಇದಕ್ಕಾಗಿ ಉಣ್ಣೆಯ ಅಥವಾ ರೇಶಿಮೆಯ ಜಾಕೆಟ್ಟುಗಳನ್ನು ತೊಡುವುದು ಉತ್ತಮವು ಆದರೆ ಬಿಸಿಲು ಕಾಲದಲ್ಲಿ ಇಂತಹ ಬಟ್ಟೆಗಳನ್ನು ಧರಿಸುವುದು ಹೆಣ್ಣುಮಕ್ಕಳಿಗೆ ಕಷ್ಟವಾಗಿ ತೋರಬಹುದು. ಹಾಗಿದ್ದರೂ ಅಂತಹ ಬಟ್ಟೆಯು ಶಾಖವನ್ನು ಕಾಪಾಡುವುದರೊಡನೆ ತೇವವನ್ನು ಹೀರಿಕೊಳ್ಳುವುದು. ಹೀಗೆ ಬಿಸಿಲು ಕಾಲದಲ್ಲಿ ಮೈ ಬೆವರನ್ನು ಹೀರಿಕೊಳ್ಳುತ್ತ, ಚಳಿಗಾಲದಲ್ಲಿ ದೇಹದ ಉಷ್ಣವನ್ನು ಕಾಪಾಡುವುದರಿಂದ, ಅಂತಹ ಉಡುಪು ಯಾವಾಗಲೂ ದೇಹಕ್ಕೆ ಒಳ್ಳೆಯದು. ಒಡ್ಯಾಣ, ನಡುವಿನಪಟ್ಟಿ ಇವುಗಳನ್ನು ಬಿಗಿದು ಕಟ್ಟಬಾರದು.

ಗರ್ಭಿಣಿಯು ಪತಿಸಂಗ ಮಾಡಬೇಕೆ ? ಮಾಡಬಾರದೆ ? ಸ್ತ್ರೀಯಳು ಒಮ್ಮೆ ಗರ್ಭಿಣಿಯಾದ ಬಳಿಕ ಪುನಃ ಪತಿಸಂಗವನ್ನು ಮಾಡಲೇಬಾರದು. ಒಂದು ವೇಳೆ ಅಜ್ಞಾನದಿಂದ ಆಗಲಿ ಅಥವಾ ಕಾಮಾತುರತೆಯಿಂದಾಗಲಿ ಮಾಡುವದು ಪಶುವೃತ್ತಿಗಿಂತಲೂ ಕೀಳಾಗಿದೆ. ಈ ಅತಿಕ್ರಮಣದ ವರ್ತನೆಯಿಂದ ಪುರುಷರ ಭಾರವು ಸ್ತ್ರೀಯಳ ಶರೀರದ ಮೇಲೆ ಬಿದ್ದು ಗರ್ಭಾಶಯಕ್ಕೆ ಪೆಟ್ಟು ತಾಕಿ ಗರ್ಭಪಾತವಾಗಿ ಕಡೆಗೆ ನಂಜೇರಿ ಮೃತ್ಯುವಿನ ಬಾಯಿಗೆ ತುತ್ತಾಗಬೇಕಾಗುವದು.

ಜ್ಞಾನರಹಿತವಾದ ಪಶುಪಕ್ಷಿಗಳಲ್ಲಿ ಗರ್ಭಧಾರಣವು ಕ್ಲುಪ್ತವಾಗಿರುತ್ತದೆ. ಜ್ಞಾನಿಗಳಾದ ಮನುಷ್ಯರಲ್ಲಿ ಹಾಗೆ ಇಲ್ಲ. ಇವರು ದಿವರಾತ್ರಿಯನ್ನದೆ ವಿಷಯಲಂಪಟರಾಗಿ ವಿಧಿ ನಿಷೇಧಗಳಿಲ್ಲದೆ ಸಿಕ್ಕ ಸಿಕ್ಕ ದಿನಗಳಲ್ಲಿ ಭೋಗಿಸುತ್ತಾರೆ; ಇದು ಗೃಹಸ್ಥಾಶ್ರಮದ ಶಾಸ್ತ್ರೀಯ ಮಾರ್ಗ

ವಲ್ಲ. ಯಾಜ್ಞವಲ್ಕ್ಯಸ್ಮೃತಿಯು ಉಪಭೋಗ ವಿಚಾರವನ್ನು ಕುರಿತು ಹೀಗೆ ಭೋದಿಸುತ್ತದೆ.

"ಷೋಡಶರ್ತುನಿಶಾಃಸ್ತ್ರೀಣಾಂ ತಸ್ಮಿನ್ ಯುಗ್ಮಾಸು ಸಂವಿಸೇತ್ ।
ಬ್ರಹ್ಮಚಾರ್ಯೇವ ಪರ್ವಾಣಾದ್ಯಾಶ್ಚತಸ್ರಸ್ತು ವರ್ಜಯೇತ್ ॥"

ಸ್ತ್ರೀಯರಿಗೆ ಗರ್ಭಧಾರಣಕ್ಕೆ ಯೋಗ್ಯವಾದ ಅವಸ್ಥೆಯು ಪ್ರಾಪ್ತವಾಗುವ ಕಾಲವೇ 'ಋತು' ಎಂದು ಹೇಳಬಹುದು. ಸ್ತ್ರೀಯರಿಗೆ ರಜೋದರ್ಶನವಾದ ದಿವಸದಿಂದ ಹದಿನಾರು ದಿವಸಗಳೊಳಗೆ ಸಮವಾದ ರಾತ್ರಿಗಳಲ್ಲಿ ಅವರನ್ನು ಉಪಭೋಗ ಮಾಡಬೇಕು. ಆದರೆ ಪುತ್ರೋತ್ಪಾದನಕ್ಕೋಸ್ಕರ ತಾನು ಸ್ತ್ರೀಯಳನ್ನು ಉಪಭೋಗಿಸುವೆನೆಂಬುದನ್ನು ಪುರುಷರು ಲಕ್ಷದಲ್ಲಿಡತಕ್ಕದ್ದು. ಆದರೆ ಅಮಾವಾಸ್ಯ, ಅಷ್ಟಮಿ, ಹುಣ್ಣಿಮೆ, ಚತುರ್ದಶಿ ದಿನಗಳಲ್ಲಿಯೂ ಸ್ತ್ರೀಯಳು ರಜಶ್ವಲೆಯಾದಂದಿನಿಂದ ನಾಲ್ಕು ರಾತ್ರಿಗಳಲ್ಲಿಯೂ ಸ್ತ್ರೀಸಂಗವನ್ನು ಮಾಡಬಾರದು. 'ಮಘಾಂ ಮೂಲಂಚ ವರ್ಜನೆಯೆತ್' ಮಘಾ ಮೂಲಾ ನಕ್ಷತ್ರಗಳಲ್ಲಿಯೂ ಉಪಭೋಗ ಮಾಡಬಾರದು. ಸ್ತ್ರೀಯಳನ್ನು ಪತಿಯು ಯಥಾಕಾಲದಲ್ಲಿ ಉಪಭೋಗಿಸಬೇಕು. ಮನಸ್ಸಿಗೆ ಬಂದಾಗ ಉಪಭೋಗಿಸಬಾರದು. ಗ್ರಹಸ್ಥಾಶ್ರಮಿಗಳು ಈ ಶಾಸ್ತ್ರೀಯ ವಿಷಯವನ್ನು ತಿಳಿದುಕೊಂಡು ಇದರಂತೆ ವರ್ತಿಸಿ ಪರಮೇಶ್ವರನ ಕೃಪೆಗೆ ಪಾತ್ರರಾಗಬೇಕು. 'ಪರಸ್ತ್ರೀಸಂಗ ನಿರ್ಮುಕ್ತಃ' ಅಂದರೆ ಪರಸ್ತ್ರೀಸಂಗದಿಂದ ಬಿಡಲ್ಪಡಬೇಕೆಂದೂ 'ಮಾತೃವತ್ಪರದಾರಾಂಶ್ಚ' ಪರಸ್ತ್ರೀಯರನ್ನು ತಾಯಿಯಂತೆ ನೋಡಬೇಕೆಂದೂ ಧರ್ಮ ಶಾಸ್ತ್ರವು ಭೋದಿಸುತ್ತಿರುವುದು.

ಬಸುರು ಇದ್ದ ಸ್ತ್ರೀಯರೊಡನೆ ಮೈಥುನ ಮಾಡಬಾರದೆಂದು ವಾಗ್ಭಟಕಾರ ಸಹ ಹೇಳಿದ್ದಾರೆ. ಮತ್ತು ತನ್ನ ಪತ್ನಿಯನ್ನೇ ತಾನು ಗರ್ಭಾದಾನಕ್ಕೆ ಮೇಲೆ ಹೇಳಿದ ಪ್ರಕಾರ ಅಯೋಗ್ಯವಿದ್ದ ಕಾಲದಲ್ಲಿ ಆಗಲಿ, ಅಥವಾ ಪೂರ್ಣ ಗರ್ಭಧಾರಣವಾದ ಮೇಲೆಯಾಗಲಿ

ಪುನಃ ಪ್ರವೇಶಿಸಿದರೆ, ತನ್ನ ಆತ್ಮಜನ್ಯ ಪ್ರಾಣಿಯ ಹಿಂಸಾದೋಷವು ತನ್ನನ್ನೇ ನರಕಕ್ಕೆ ಎಳೆದೊಯ್ಯುತ್ತದೆಂದು ತತ್ತ್ವವೇತ್ತರು ಕೂಡಾ ಆಗಾಗ್ಗೆ ಹೇಳಿದ್ದಾರೆ ಕಾರಣ ಗರ್ಭಿಣಿಯು ಪತಿಸಂಗವನ್ನು ಸರ್ವಥಾ ಮಾಡಬಾರದು ! ಮಾಡಬಾರದು !! ಇಷ್ಟೇ ಅಲ್ಲ ; ತ್ರೈತಾವಸ್ಥೆಯಲ್ಲಿಯೂ ಮಾಡಬಾರದು !!!

**ಗರ್ಭಿಣಿಯರಿಗೆ ವಿಶ್ರಾಂತಿ:—** ಪ್ರಾಯಶಃ ನಮ್ಮ ದೇಶದಲ್ಲಿ ಜನರು ಗರ್ಭಿಣಿಯರಿಂದ ಯಾವುದೊಂದು ಕೆಲಸವನ್ನೂ ಮಾಡಿಸಬಾರದೆಂದು ಹೇಳುವರು. ಸಾಧಾರಣವಾದ ಗೃಹಕಾರ್ಯಗಳನ್ನು ಕೂಡ ಅವರಿಂದ ಮಾಡಿಸುವುದಕ್ಕೆ ಬಿಡುವುದಿಲ್ಲ. ಇದು ತಪ್ಪು ! ಆದರೆ ದೊಡ್ಡ ಭಾರವನ್ನೆತ್ತುವುದು ಮುಂತಾದ ಮೈಗೆ ಬಹಳ ಆಯಾಸ ಕೊಡತಕ್ಕ ಕೆಲಸಗಳನ್ನು ಮಾತ್ರ ಗರ್ಭಿಣಿಯು ಎಂದೂ ಮಾಡಕೂಡದು. ಕೆಲವು ವೇಳೆ ಆದರಿಂದ ಅಪಾಯವೂ ಉಂಟು. ಆದರೆ ಮೈಗೆ ಯಾವ ವಿಧವಾದ ಕೆಲಸವನ್ನೂ ಕೊಡದೆ, ವ್ಯಾಯಾಮವೂ ಇಲ್ಲದೆ ಸುಮ್ಮನೆ ಕುಳಿತಿರುವುದು ಗರ್ಭಿಣಿಯರಿಗೆ ಅಪಾಯಕ್ಕೆ ಕಾರಣವು. ಆರೋಗ್ಯವುಳ್ಳ ಪ್ರತಿಯೊಬ್ಬ ಹೆಂಗಸು ಏಳೆಂಟು ತಿಂಗಳವರೆಗೆ ಎಂದರೆ ಪ್ರಸವಕಾಲಕ್ಕೆ ಎರಡು ತಿಂಗಳು ಮುಂಚಿನವರೆಗೂ ತನ್ನ ಗೃಹಕೃತ್ಯಗಳನ್ನು ಧಾರಳವಾಗಿ ಮಾಡುತ್ತ ಹೋಗಬಹುದು. ಮತ್ತು ಗರ್ಭಿಣಿಯರಿಗೆ ಶರೀರಕ್ಕೂ, ಬುದ್ಧಿಗೂ ಸಾಧಾರಣವಾದ ವ್ಯಾಯಾಮವಿದ್ದೇ ಇರಬೇಕು. ಆರೋಗ್ಯ ರಕ್ಷಣೆಗೆ ಇದು ಬಹಳ ಮುಖ್ಯವು. ಗರ್ಭಿಣಿಯರು ಬಯಲು ಸ್ಥಳಗಳಲ್ಲಿ ಕೊನೆಯ ಪಕ್ಷ ಒಂದು ಘಂಟೆಯ ಹೊತ್ತು ವ್ಯಾಯಾಮವನ್ನು ತೆಗೆದುಕೊಳ್ಳುವುದರಿಂದ ಬಹಳ ಗುಣವುಂಟು. ಗರ್ಭಿಣಿಯರು ನೆನಪಿನಲ್ಲಿಡಬೇಕಾದ ಒಂದು ಮುಖ್ಯ ವಿಷಯವೇನಂದರೆ ಅವರು ಶುದ್ಧವಾದ ಗಾಳಿಯನ್ನು ಧಾರಳವಾಗಿ ಸೇವಿಸಲು ಅವಕಾಶ ಮಾಡಿಕೊಳ್ಳಬೇಕು. ಇಲ್ಲದಿದ್ದರೆ ಅವರು ತಮ್ಮ ಆರೋಗ್ಯವನ್ನು ಕೆಡಿಸಿಕೊಳ್ಳುವುದರೊಡನೆ ಗರ್ಭಸ್ಥ ಶಿಶುವಿನ ಆರೋಗ್ಯವನ್ನು ಕೆಡಿಸಲು ಕಾರಣರಾಗುವರು.

ತಾಯಿಯ ಗುಣಧರ್ಮಗಳೇ ಮಕ್ಕಳಲ್ಲಿ ಉದಯಿಸುವವು ಆದುದರಿಂದ ತಮ್ಮ ವಂಶೋದ್ಧಾರವನ್ನು ಮಾಡಿ ಗೌರವ ಪ್ರತಿಷ್ಠೆಗಳನ್ನು ಹೊಂದಿ ಕೀರ್ತಿ ಶಾಲಿಗಳಾಗಿ ಬಾಳುವ ಮಕ್ಕಳು ಜನಿಸಬೇಕೆಂಬ ಅಪೇಕ್ಷೆಯುಳ್ಳ ಸ್ತ್ರೀಯರು ಗರ್ಭಧರಿಸಿದಮೇಲೆ ಸದಾಚಾರಿಗಳೂ, ನೀತಿವಂತರೂ ಆಗಿರಬೇಕು. ಪುರಾಣ ಪುಣ್ಯ ಕಥೆಗಳನ್ನು ಕೇಳುತ್ತಿರಬೇಕು. ನಿರ್ಮಲ ಮನಸ್ಸಿನಿಂದ ಗುರು-ದೇವರನ್ನು ಧ್ಯಾನಿಸುತ್ತ ಪೂಜಿಸುತ್ತಿರಬೇಕು. ಅಂದರೆ ಸದ್ವರ್ತನೆಯುಳ್ಳ ಮಕ್ಕಳು ಜನಿಸಿ ಅವರ ಮನದಬಯಕೆಯು ನೆರವೇರುವದು; ಮತ್ತು ಅವರ ಜನ್ಮವೂ ಸಾರ್ಥಕವಾಗುವುದು.



೫

# ನಿಮಗೆ ಮಕ್ಕಳು ಬೇಕೆ ?

## ಮಕ್ಕಳನ್ನು ಹಡೆಯುವದು ನಿಮ್ಮ ಕೈಯಲ್ಲಿಯೇ ಇದೆ.

---

ಒಂದಕ್ಕೆ ಎರಡು ಎರಡಕ್ಕೆ ನಾಲ್ಕು ಹೀಗೆ ಮುಂದೆ ಮುಂದೆ ಕೂಡಿ ವರಿಯುತ್ತಿರುವುದೇ ಸೃಷ್ಟಿಯವೈಶಿಷ್ಟ್ಯ. ಪಂಚ ಭೂತಗಳಲ್ಲಿ ಒಂದಿಲ್ಲೊಂದು ರೀತಿಯಲ್ಲಿ ವಿಕಾಸ (ಪರಿಣಾಮ) ವು ನಡೆವೇ ಇರುತ್ತೆ. ಕಾರಣದಲ್ಲಿ ಪುನಃ ಬೆರೆತಾಗಲೇ ಕಾರ್ಯದ ವಿಕಾಸದ ಇತಿಶ್ರೀ ಯಾಗುವುದು. "ಆತ್ಮಾ ವೈಪುತ್ರ ನಾಮಾಸಿ" ಎಂದಿರುವುದರಿಂದ ಮಗುವು ತಾಯಿ-ತಂದೆಗಳ ರೂಪಾಂತರ ಅಥವಾ ಪರಿಣಾಮವೇ ಆಗಿದೆ. ಧನ-ಧಾನ್ಯ ಹಣ ಮುಂತಾಗಿ ಎಲ್ಲವೂ ಇದ್ದು ಸಂತಾನ ವೊಂದಿಲ್ಲದಿದ್ದರೆ ಸಂಸಾರವು ನೀರಸವಾಗಿ ತೋರುತ್ತೆ. ಸಂತಾನದ ಉತ್ಪಾದನೆಗಾಗಿಯೇ ಗೃಹಸ್ಥ ಧರ್ಮದ ಏರ್ಪಾಟಾಗಿದೆ. ಆದ್ದರಿಂದ ಮಕ್ಕಳಿಲ್ಲದ ದಾಂಪತ್ಯವು ತನ್ನ ಗುರಿಯನ್ನು ಸಾಧಿಸಲಿಲ್ಲವೆಂದೇ ಹೇಳಬೇಕು.

ಮಕ್ಕಳಿಲ್ಲದ ಸ್ತ್ರೀ ಬಂಜೆಯೆನಿಸುತ್ತಾಳೆ. ಭಾರತೀಯರು ಮಕ್ಕಳಿಗೆ ಕೊಟ್ಟಷ್ಟು ಮಹತ್ವವನ್ನು ಜಗತ್ತಿನಲ್ಲಿ ಮತ್ತಾವ ಜನಾಂಗವೂ ಕೊಟ್ಟಿಲ್ಲ. "ಅಪುತ್ರಸ್ಯ ಗತಿರ್ನಾಸ್ತಿ" ಮಕ್ಕಳಿಲ್ಲದವರಿಗೆ ಮೋಕ್ಷವಿಲ್ಲ; ಎಂದು ಹೇಳುವವರೂ ನಮ್ಮಲ್ಲಿ ಇದ್ದಾರೆ. ಆದರೆ ಮಕ್ಕಳಿಗೂ ಮೋಕ್ಷಕ್ಕೂ ಬಾದರಾಯಣ ಸಂಬಂಧವೂ ಕೂಡ ಇಲ್ಲ. ಇಲ್ಲಿ "ಗತಿ" ಶಬ್ದಕ್ಕೆ ಸಾಂಸಾರಿಕ ಪ್ರಗತಿ ಅಥವಾ ವಂಶಾಭಿವೃದ್ಧಿ ಎಂದು ಅರ್ಥ ಕೊಡುವುದೊಳಿತು.

ಮಕ್ಕಳಾಗದಿರುವುದಕ್ಕೆ ಅನೇಕ ಕಾರಣಗಳಿವೆ ಮೊದಲನೆಯದಾಗಿ ಸ್ತ್ರೀ ಪುರುಷರೀರ್ವರಲ್ಲಿ ಯಾರಾದರೊಬ್ಬರು ಗರ್ಭೋತ್ಪಾದನೆಗೆ ಅಯೋಗ್ಯರಾಗಿರುವುದು ಅಥವಾ ಇಬ್ಬರೂ ಅಯೋಗ್ಯರಾಗಿರುವುದು. ಶರೀರದ ರೋಗ ಮತ್ತು ಅಧರ್ಮ ಅರ್ಥಾತ್ ಪಾಪ ಈ ಎರಡು ಕಾರಣಗಳಿಂದ ಸಂತಾನವಾಗುತ್ತಿರುವದಿಲ್ಲ ಸಂತಾನ ಲಾಭಕ್ಕಾಗಿ ಭಾರತೀಯ ಋಷಿಮುನಿಗಳು ಅನೇಕ ಉಪಾಯಗಳನ್ನು ಕಂಡು ಹಿಡಿದಿದ್ದಾರೆ. ಆದಿಕಾಲದಲ್ಲಿ ಸಂತಾನ ಲಾಭಕ್ಕಾಗಿ ಕೇವಲ ದೈವೋಪಾಸನೆ ಮಾಡುತ್ತಿದ್ದರು ಆ ಮೇಲೆ ಅದಕ್ಕೆ ಔಷಧಗಳೂ ಕಂಡು ಹಿಡಿಯಲ್ಪಟ್ಟವು.

ಇಕ್ಷ್ವಾಕುವಂಶದ ರಾಜನಾದ ದಿಲೀಪನಿಗೆ ಮಕ್ಕಳಿಲ್ಲದಿರಲು ತನ್ನ ಹೆಂಡತಿಯಾದ ಸುದಕ್ಷಿಣೆಯೊಡನೆ ಕುಲಗುರು ವಶಿಷ್ಠನ ಆಶ್ರಮಕ್ಕೆ ಹೋಗುತ್ತಾನೆ. ತ್ರಿಕಾಲಜ್ಞಾನಿಯಾದ ವಶಿಷ್ಠನು ದಿಲೀಪನ ಸಂತಾನವಿಲ್ಲದಿರುವಿಕೆಗೆ ಕಾರಣವನ್ನು ಕಂಡುಹಿಡಿದು ಹೀಗೆ ಹೇಳುತ್ತಾನೆ:— 'ನೀನು ಒಮ್ಮೆ ಸ್ವರ್ಗಕ್ಕೆ ರಾಕ್ಷಸರ ಸಂಹಾರಕ್ಕೆ ಹೋದಾಗ ನಿನ್ನ ಹೆಂಡತಿಯ ಋತು ಸ್ನಾನವನ್ನು ನೆನೆದು ಮರಳಿ ಭೂಲೋಕಕ್ಕೆ ವೇಗವಾಗಿ ಬರತೊಡಗಿದೆ. ಆಗ ಸಂಧ್ಯಾಕಾಲವಾಗಿತ್ತು. ಆಕಾಶಗಂಗೆಯು ಧುಮು-ಧುಮುಸಿ ಹರಿಯುತ್ತಿತ್ತು. ನಿನ್ನ ಮನವೋ ಸೃಷ್ಟಿಸೌಂದರ್ಯದಲ್ಲಿ ಲೀನವಾಗಿತ್ತು. ಸಾರಥಿಯು ವಾಯುವೇಗದಿಂದ ರಥವನ್ನು ಕೆಳಗಿಳಿಸುತ್ತಿದ್ದ. ನೀನು ಹೊರಬಿದ್ದ ಹಾದಿಯ ಒಂದು ಪಕ್ಕಕ್ಕೆ ಕಾಮಧೇನುವು ನಿಂತಿತ್ತು. ಅತ್ತ ನಿನ್ನ ಲಕ್ಷ್ಯವು ಹೋಗದಿರಲು ಕಾಮಧೇನುವು ಮುನಿದು ನಿನಗೆ ನನ್ನ ಮಗಳನ್ನು ಸೇವಿಸಿದೆ ಸಂತಾನವಾಗಲಾರದು, ಹೋಗೆಂದು ಶಾಪವಿತ್ತಿತು. ಆ ಶಾಪ ಪ್ರಭಾವದಿಂದಲೇ, ನಿನಗೆ ಈಗ ಸಂತತಿಯಾಗಿಲ್ಲ'.

ಆಮೇಲೆ ವಸಿಷ್ಠನ ಅಪ್ಪಣೆಯಂತೆ ದಿಲೀಪನು ಅಲ್ಲಿಯೇ ಆಶ್ರಮದಲ್ಲಿದ್ದು ಕಾಮಧೇನುವಿನ ಮಗಳಾದ ನಂದಿನಿ (ಗೋ)ಯ ಸೇವೆಯನು ಒಂದು ವರುಷದವರೆಗೆ ಪತ್ನೀಸಮೇತನಾಗಿ ಮಾಡುತ್ತಾನೆ. ಆ ಒಂದು

ವರುಷದ ಅವಧಿಯಲ್ಲಿ ದಿಲೀಪನು ಪರ್ಣಕುಟೀರದಲ್ಲಿ ವಾಸ ಮಾಡುತ್ತಾನೆ. ಹೆಂಡತಿಯೊಡನೆ ಕೂಡಿದ್ದರೂ ಬ್ರಹ್ಮಚರ್ಯವನ್ನು ಪಾಲಿಸುತ್ತಾನೆ. ಬ್ರಾಹ್ಮೀ ಮುಹೂರ್ತದಲ್ಲಿಯೇ ದಂಪತಿಗಳೀರ್ವರು ಎದ್ದು ಶೌಚಾಚಮನಸ್ನಾನಾದಿಗಳನ್ನು ತೀರಿಸಿಕೊಂಡು ಗೋ ಸೇವೆಗೆ ತೊಡಗುತ್ತಾರೆ. ಸ್ವತಃ ದಿಲೀಪನೇ ದಿನಾಲು ಆ ಗೋವನ್ನು ಅಟ್ಟಿಕೊಂಡು ಮೇಯಿಸಲು ಕಾಡಿಗೆ ಹೋಗುತ್ತಾನೆ. ವರ್ಷಾಂತ್ಯದಲ್ಲಿ ನಂದಿನಿಯು ದಿಲೀಪನ ಭಕ್ತಿಯದ್ನು ಪರೀಕ್ಷಿಸಿ ಸಂತತಿಯಾಗುವಂತೆ ಹರಸುತ್ತದೆ. ಈ ಹರಿಕೆಯಿಂದಲೇ ಮುಂದೆ ದಿಲೀಪನಿಗೆ ಜಗದ್ವಿಜಯಿಯಾದ ರಘುವು ಹುಟ್ಟುತ್ತಾನೆ.

ಈ ಕಥೆಯು ವಜ್ಞಾನಪೂರ್ಣವಾಗಿದೆ. ಈಗಾದರೂ ಸಂತತಿಯಿಲ್ಲದವರು ಈರೀತಿ ಆಚರಿಸಿ ಸಂತತಿಯನ್ನು ಪಡೆಯಬಹುದಾಗಿದೆ. ಭೋಗ ಲಾಲಸಾ ಮಯವಾದ ಈ ಕಾಲದಲ್ಲಿ ಸ್ತ್ರೀಪುರುಷರೀರ್ವರೂ ಚಂಚಲಮನಸ್ಕರಾಗಿ ರಜೋವೀರ್ಯಗಳನ್ನು ಹೆಚ್ಚಾಗಿ ನಷ್ಟಪಡಿಸಿ ಕೊಳ್ಳುತ್ತಾರೆ. ಇದರಿಂದ ಪುರುಷನ ವೀರ್ಯದಲ್ಲಿ ಜೀವಾಣುಗಳೇ ಇಲ್ಲದಂತಾಗುತ್ತದೆ. ಸ್ತ್ರೀಯಳಡೂ ಇದೇ ಗತಿ. ಕೇವಲ ವೀರ್ಯದಿಂದ ಅಥವಾ ಕೇವಲ ರಜಸ್ಸಿನಿಂದ ಸಂತಾನೋತ್ಪತ್ತಿ ಯಾಗುವುದಿಲ್ಲ. ಚೈತನ್ಯಯುಕ್ತವಾದ ರಜೋವೀರ್ಯಗಳ ಮಿಶ್ರಣವೆ ಗರ್ಭಧಾರಣೆಗೆ ಕಾರಣ. ಆದ್ದರಿಂದ ಸಂತಾನಾಕಾಂಕ್ಷಿಗಳಾದ ಸತಿ-ಪತಿಗಳು ಸಂಯಮಿಗಳಾಗಬೇಕು. ದೂಷಿತ ಹವೆಯುಳ್ಳ ನಗರಗಳ ವಾಸವನ್ನು ತೊರೆದು ಹಳ್ಳಿಯಲ್ಲಿಯೋ ಹೊಲದಲ್ಲಿಯೋ ಪ್ರತ್ಯೇಕವಾದ ಸ್ಥಳದಲ್ಲಿ ವಾಸಮಾಡಬೇಕು. ಒಂದು ವರುಷದವರೆಗೆ ದಂಪತಿಗಳು ಬ್ರಹ್ಮಚಾರಿಗಳಾಗಿದ್ದು ಗೋ ಸೇವೆಯನ್ನು ಮನಮುಟ್ಟಿ ಮಾಡಬೇಕು. ಹೊಲಗೆಲಸ ಮುಂತಾದ ಧಾವತಿ ಕೆಲಸಗಳನ್ನು ಮಾಡಬೇಕು. ಉಂಡುಂಡು ಯಾವ ಕೆಲಸಮಾಡದೆ ಕುಳಿತರೆ ಮೈಯಲ್ಲಿ ಅನಾವಶ್ಯಕವಾದ ಮೇದಸ್ಸು ಬೆಳೆಯುತ್ತದೆ. ಅದರಿಂದ ಸಂತತಿಯಾಗುವದಿಲ್ಲ. ಆದ್ದರಿಂದ ಸಂತಾನಾಕಾಂಕ್ಷಿಗಳು ತಕ್ಕಷ್ಟು ಪರಿಶ್ರಮ ಮಾಡಬೇಕು ಆಕಳ ಹಾಲು, ತುಪ್ಪ, ಮಜ್ಜಿಗೆ, ಎಲ್ಲತರದ ಹಣ್ಣು, ಕಾಯಪಲ್ಲೆಗಳನ್ನು ಆಹಾರದಲ್ಲಿ ವಿಶೇಷವಾಗಿ ಉಪ

ಯೋಗಿಸಬೇಕು. ವಾಯುಸೇವನೆ, ಈಜುವದು, ಪೌಷ್ಟಿಕ, ಸಾತ್ವಿಕ ಔಷಧ ಸೇವನ ಇತ್ಯಾದಿಗಳೂ ಆವಶ್ಯಕ. ಈ ಅವಧಿಯಲ್ಲಿ ಸ್ತ್ರೀಯಳು ಫಲಘೃತ ಕಲ್ಯಾಣಘೃತಾದಿ ಔಷಧಗಳನ್ನೂ ಪುರುಷನು ಚವನಪ್ರಾಸಾದಿ ಔಷಧ ಗಳನ್ನೂ ಸೇವಿಸಬೇಕು. ಮತ್ತು ದಾನ ಧರ್ಮ ಪರೋಪಕಾರ ಸತ್ಕಥಾ ಶ್ರವಣ ಸದ್ಗ್ರಂಥಾವಲೋಕನಗಳನ್ನೂ ಮಾಡಬೇಕು. ಮನಸ್ಸಿನ ನಿಗ್ರಹಕ್ಕಾಗಿ ಇಷ್ಟದೇವತೆಯ ಮೂಲಮಂತ್ರವನ್ನೂ ಜಪಿಸಬೇಕು. ಘಂಟಾಕರ್ಣಮೂಲ ಮಂತ್ರಜಪವು ಅತ್ಯಂತ ಫಲಕಾರಿಯಾಗಿದೆ. ಈ ರೀತಿ ವ್ರತನಿಯಮಗಳನ್ನೂ ಕೈಕೊಳ್ಳುವ ಮೊದಲು ಸ್ತ್ರೀಪುರುಷರೀರ್ವರು ತಮ್ಮ ಆರೋಗ್ಯವು ಸಾಧಾ ರಣ ಸರಿಯಾಗಿದೆಯೋ ಇಲ್ಲೋ ಎಂಬುದನ್ನು ಪರೀಕ್ಷಿಸಿ ಕೊಳ್ಳಬೇಕು. ಯಾವದೊಂದು ವಿಶೇಷ ರೋಗವಿದ್ದಾಗ ಸಂತಾನವನ್ನು ಬಯಸಿ ವ್ರತನಿ ಯಮಗಳನ್ನು ಆಚರಿಸುವುದು. ಸರಿಯಲ್ಲ. ಮೊದಲು ಆರೋಗ್ಯದಿಂದ ಮುಕ್ತರಾಗಿ ಮೇಲೆ ಬರೆದ ನಿಯಮದಂತೆ ಆಚರಿಸಬೇಕು. ಮೇಲೆ ಬರೆದ ನಿಯಮಗಳು ಸಾಧಾರಣರೋಗಗಳೇನಾದರೂ ಇದ್ದಲ್ಲಿ ಅವೆಲ್ಲವನ್ನು ಕಳೆದು ಸತಿಪತಿಗಳನ್ನು ಸಂತಾನಯೋಗ್ಯರನ್ನಾಗಿ ಮಾಡುತ್ತವೆ. ಆಕಳ ಹಾಲು ಬಂಜೆತನವನ್ನು ಕಳೆಯುತ್ತದೆ ಆಕಳ ಹಾಲಲ್ಲಿ ಅನೇಕ ರೋಗಗಳನ್ನು ನಿವಾರಿಸುವ ಶಕ್ತಿಯಿದೆ. ಆದ್ದರಿಂದಲೇ ಮಕ್ಕಳಿಲ್ಲದವರಿಗೆ ಗೋ ಸೇವೆಯೇ ಗತಿಯೆಂದು ಹೇಳಿರುವದು. ಮಕ್ಕಳ ಬಯಕೆಯುಳ್ಳವರು ಈ ಯೋಗವನ್ನು ಆಚರಿಸಿ ಸುಖಿಗಳಾಗಲಿ.

(ಭಾರತೀಯ ಸಿದ್ಧಾಂತ)

೬

# ಹೊನ್ನಮ್ಮನ ಬಗ್ಗೆ ವಿಚಾರ



ಸಿಂಗರಾರ್ಯನ ಶಿಷ್ಯೆಯಾದ ಹೊನ್ನಮ್ಮನು 'ಹದಿಬದೆಯ ಧರ್ಮ' ವನ್ನು ಸಾಂಗತ್ಯದಲ್ಲಿ ಬರೆದಳು. ಈಕೆಯು ಚಿಕ್ಕದೇವರಾಜನ ಅಂತಃಪುರದಲ್ಲಿ ಸಂಚಿಯ ಊಳಿಗದಲ್ಲಿದ್ದಳು. ಈಕೆಯ ಪಾಂಡಿತ್ಯವನ್ನು ಗ್ರಹಿಸಿ ಈಕೆಯಿಂದ ಕಾವ್ಯವನ್ನು ಬರೆಯಿಸಬೇಕೆಂದು ಅರಸನು ಅರಸಿಯೊಡನೆ ಹೇಳಿದನಂತೆ ಅರಸಿಯ ಆಜ್ಞೆಯಂತೆ ತಾನು ಈ ಗ್ರಂಥವನ್ನು ಬರೆಯತೊಡಗಿದ್ದಾಗಿ ಹೊನ್ನಮ್ಮನು ಹೇಳಿದ್ದಾಳೆ. ಪತಿವ್ರತೆಯರಾದ ಹೆಂಗಸರು ಹೇಗೆ ನಡೆದುಕೊಳ್ಳಬೇಕೆಂಬುದೇ ಈ ಗ್ರಂಥದ ವಸ್ತು. ಆಕೆಯ ಹಲವು ಅಭಿಪ್ರಾಯಗಳು ಈ ಕಾಲದ ನಮಗೆ ಒಪ್ಪಿಗೆಯಾಗದಿದ್ದರೂ ಆಕೆಯು ಸುಲಲಿತವಾದ ಮಾತಿನಲ್ಲಿ ಹಲವು ನೀತಿಗಳನ್ನು ಹೇಳಿರುವ ರೀತಿಯು ಮೆಚ್ಚುಗೆಯನ್ನುಂಟು ಮಾಡುತ್ತದೆ.

ಪದಿನೆಂಟು ಬಣ್ಣನೆಯೆಂದು ಬವಣೆಗೊಂಡು
ಪದಗೆಟ್ಟು ಬಯಲ ಬಣ್ಣಿಸದೆ
ಮುದದೊಡನಿಹಪರದೇಳ್ಗೆವಡೆಯೆ
ಹದಿಬದೆಯ ಧರ್ಮವ ಬಣ್ಣಿಪೆನು ||

ಎಂಬುದರಲ್ಲಿ ವಿಡಂಬನವಿದ್ದರೂ ಇರಬಹುದು.

ಪೆಣ್ಣಲ್ಲವೇ ತಮ್ಮನೆಲ್ಲ ಪಡೆದ ತಾಯಿ
ಪೆಣ್ಣಲ್ಲವೇ ಪೊರೆದವಳು

ಪೆಣ್ಣು ಪೆಣ್ಣೆಂದೇತಕೆ ಬೀಳಗಳೆವರ:
ಕಣ್ಣು ಕಾಣದ ಗಾವಿಲರು ||

ಎಂದು ನುಡಿದ ಹೊನ್ನಮ್ಮನು ಹೆಣ್ಣು ಜನ್ಮದ ಉತ್ಕೃಷ್ಟ ನ್ಯಾಯವಾದಿ ಅಲ್ಲದೆ "ಪೆಣ್ಣು ಪೆತ್ತುದರಿಂದೆ ಪೆಸರೆನಿಸಿತು ಮಿಗೆ ಬಣ್ಣವೇರಿತು ಫಾಲ್ಗುಡಲು" ಎಂದು ಹೆಳಿರುವದನ್ನು ನೋಡಿವರೆ ಹೊನ್ನಮ್ಮನ ಕಾಲಕ್ಕೆ ವರದಕ್ಷಿಣೆವರೋಪಚಾರಗಳ ಹಾವಳಿ ಹೆಚ್ಚಾಗಿರಲಿಲ್ಲವೆಂದು ತೋರುತ್ತದೆ! ಸದಾ ಜಗಳ ಕಾಯುತ್ತಿರುವ ಗಂಡಹೆಂಡಿರನ್ನು ಕೋಪದಿಂದ ನುಂಗದೆ ಸಹಿಸಿಕೊಂಡು ಸುಮ್ಮನಿರುವುದರಿಂದ ಭೂಮಿಗೆ "ಸರ್ವಂಸಹೆ" ಎಂದು ಹೆಸರಾಯಿತಂತೆ! ಕಾವ್ಯದ ಕೊನೆಯಲ್ಲಿ ಹೊನ್ನಮ್ಮ "ಕನ್ನಡನಾಡೊಳು ಕಲಿಯುಗ ಪುಗದಿರ್ಕೆ" ಎಂದು ಹರಿಸಿದ್ದಾಳೆ. ಒಟ್ಟಿನಲ್ಲಿ ಹೊನ್ನಮ್ಮನ 'ಹದಿಬದೆಯ ಧರ್ಮ" ವು ಒಂದು ಚೆಲುವಾದ ತಿಳಿಗನ್ನಡದ ಲಲಿತ ಗ್ರಂಥ. ಸರ್ವಜನ ಗ್ರಾಹ್ಯವಾದುದು.

(ಕನ್ನಡಸಾಹಿತ್ಯ)

೭

# ಶ್ರೀಕೃಷ್ಣನು ದ್ರೌಪದಿಗೆ ಮಾಡಿದ ಹಿತೋಪದೇಶ

ಬಾಲಕಿಯೆ ಬಾ ತಂಗಿ ಬಾ ನೀ-
ಲಾಳಕಿಯೆ ಬಾರೆನುತ ಮಿಗೆ ಪಾಂ-
ಚಾಲಿಯನು ಕರೆದಸುರರಿಪು ಮನ್ನಿಸಿದನುಚಿತದಲಿ ||
ನಂಬದಿರು ಸಿರಿಯನು ಪತಿವ್ರತೆ
ಯೆಂಬರಿಗೆ ನೀ ಗುರು ವಿಷಾದ ವಿ-
ಡಂಬ ಹರುಷಂಗಳಲಿ ನೀನಿಹುದುದೇಕಚಿತ್ತದಲಿ ||
ಸೋತು ನಡೆವುದು ಹಿರಿಯರಲಿ ಸಂ-
ಪ್ರೀತಿಯನು ಸುಜನರಲಿ ನಿರ್ಮಳ
ನೀತಿಯನು ಪರಿವಾರ ಪುರಜನ ನಾಡಬೀಡಿನಲಿ ||
ಖ್ಯಾತಿಯನು ಧರ್ಮದಲಿ ವೈರಿ
ವ್ರಾತದಲಿ ಪೌರುಷವನಖಿಳ
ಜ್ಞಾತಿಯೊಳಗೆಚ್ಚರಿಯೊಳಿಹುದೆಂದ ಸುರರಿಪು ನುಡಿದ ||

(ಮಹಾಭಾರತ || ಸಭಾಪರ್ವ ೧೨-೧೯)

ಐಶ್ವರ್ಯವನ್ನು ನಂಬಬೇಡ, ಪತಿವ್ರತೆಯುಳ್ಳವರಿಗೆಲ್ಲ ನೀನು ಗುರುವಾಗಿರು, ದುಃಖ-ವಿಡಂಬ-ಸಂತೋಷಗಳಲ್ಲಿ ನೀನು ಒಂದೇ ಮನಸ್ಸಿನಿಂದಿರು ದೊಡ್ಡವರಲ್ಲಿ ಸೋತು (ಅಂಜಿ) ನಡೆ, ಸಜ್ಜನರಲ್ಲಿ ಒಳ್ಳೇ ಪ್ರೀತಿಯುಳ್ಳವಳಾಗಿರು. ದೇಶದ ಮನೆಯೊಳಗಿದ್ದುಕೊಂಡು ನಿನ್ನ ಪರಿವಾರನ್ನೂ

ಪಟ್ಟಣದ ಜನವೂ ಮೆಚ್ಚುವಂತೆ ಸ್ವಚ್ಛವಾದ (ಕುಂದಿಲ್ಲದ)ನೀತಿಯುಳ್ಳವ ಳಾಗಿರು, ಧರ್ಮದಲ್ಲಿ ಪ್ರಸಿದ್ಧಿಯನ್ನೂ, ವೈರಿಗಳ ಸಮೂಹದಲ್ಲಿ ಪೌರುಷ (ಗೌರವ)ವನ್ನೂ ಹೊಂದಿಕೊಂಡಿರು, ಬಂಧುಗಳ ಆದರೋಪಚಾರ ವಿಷಯ ದಲ್ಲಿ ಜಾಗ್ರತೆಯಾಗಿರು, ಈ ಪ್ರಕಾರ ಶ್ರೀಕೃಷ್ಣನು ಹೇಳಿದನು.



# ಸಿಂಹಳರಾಜನು ಮಗಳಿಗೆ ಮಾಡಿದ ಉಪದೇಶ



ತಂಗಿ ನಿಜೇಶ್ವರಂಗೆ ಬಗೆದಂತಿರೆ ನೀಂ . ಬೆಸಕೈವುದತ್ತೆ ಮಾವಂಗಳ ಮಾತುಮಂ ಮರೆದು ಮೀರದಿರಾರ್ಯಹಿತೋಕ್ತಿಗಳ್ಗೆ ಚಿ|| ತ್ತಂಗುಡು ಬಂಧುವರ್ಗದುಪಚಾರ ಮನಾಂತಿರುಮೀಶ ಭಕ್ತಿಯಂ ಸಿಂಗದಿರೋಳ್ದಿಸಂ ಬಡೆದು ಬಾಳ್ದಮಗೀವುದತಿಪ್ರಮೋದಮಂ ||೧||

ತಂಗೀ ನಿನ್ನ ಗಂಡನಿಗೆ ಯಾವಾಗಲೂ ಕಲ್ಯಾಣವನ್ನು ಇಚ್ಛಿಸು ಮತ್ತು ನೀನು ಅವನ (ಗಂಡನ) ಆಜ್ಞಾ ಪ್ರಕಾರ ನಡೆಯುವವಳಾಗು, ಅತ್ತೆ-ಮಾವಂದಿರ ವಚಗಳನ್ನು ಮರೆತು ಬಿಡದಿರು ಅರ್ಥಾತ್ ಕೇಳು, ಹಿರಿಯರ ಹಿತವಾದ ಮಾತುಗಳಿಗೆ ಲಕ್ಷ್ಯಗೊಡು. ಆಪ್ತರ ಮತ್ತು ಅತಿಥಿಗಳ ಉಪಚಾರವನ್ನು ಯಾವಾಗಲೂ ಸರಿಯಾಗಿ ಮಾಡುತ್ತಿರು. ಭಗವಂತನಲ್ಲಿಯೂ, ಗುರುಗಳಲ್ಲಿಯೂ ಭಕ್ತಿಯನ್ನಿಡು, ಈ ಪ್ರಕಾರ ನಡೆದು ಕೀರ್ತಿಯನ್ನು ಸಂಪಾದಿಸಿ ಬಾಳಿ ನಮಗೆ ಬಹಳ ಸಂತೋಷವನ್ನುಂಟುಮಾಡಬೇಕು. ಈ ಪ್ರಕಾರ ಸಿಂಹಳರಾಜನು ಹೇಳಿದನು.



೯

# ತವರು ಮನೆಯಿಂದ ಪತಿ-ಗೃಹಕ್ಕೆ ಪ್ರಯಾಣ ಮಾಡಿದ ಮಗಳಿಗೆ ತಂದೆಯು ಬರೆದ ಪತ್ರ



ಒಳಿತು,

ಹುಲಕೋಟಿ.

ಕಣ್ಮಣಿ ಚಿ. ಕುಂ. ಸೌ. ಅನಸೂಯಾದೇವಿಗೆ—

ನಿನ್ನ ತಂದೆಯು ಆಶೀರ್ವಾದಗಳು.

ಮುದ್ದು ಮಗಳೇ !

ನೀನು ಇನ್ನೂ ಸಣ್ಣವಳು. ಹಿಂಡಿನೊಳಗಿನ ಚಿಗರಿಯು. ಅಗಲಿ ಹೋದಂತೆ ನಮ್ಮೆಲ್ಲರನ್ನು ಅಗಲಿ ಹೋದಮೇಲೆ ನಿನಗೆಷ್ಟು ದುಃಖವಾಗಿರುವುದೋ ಅಷ್ಟೇ ದುಃಖವು ನಿನ್ನ ಹಢೆದವರಿಗೂ ಆಗಿರುವುದು. ನಿನ್ನ ಅಣ್ಣಂದಿರು "ಅನಸಕ್ಕನು ಹೋಗಿ ಮನೆ ಬಣಬಣ ಅನ್ನುತ್ತದೆ. ಹೊರಗಿನಿಂದ ಮನೆಗೆ ಬಂದರೆ ಅನಸಕ್ಕನ ಹೆಸರೇ ಮೊದಲು ಬರುತ್ತದೆ." ಅನ್ನುವರು. ನಿನ್ನ ಹಡೆದವಳಂತೂ ಯಾವಾಗಲೂ ಮುರುಕದ ಕಣ್ಣೀರು ಸುರಿಸುತ್ತಿರುವಳು. ನಿನ್ನ ತಂಗಿಯು ಸಣ್ಣ ಮೋರೆಯನ್ನು ಮಾಡಿಕೊಂಡು "ಅಕ್ಕ ಇಲ್ಲುದದಕ್ಕೆ ನನಗೆ ಹೊತ್ತೇ ಹೋಗಲೊಲ್ಲದು" ಅನ್ನುವಳು. ನನಗಾದರೂ ಮನೆಗೆ ಹೋದಕೂಡಲೇ ನಿನ್ನ ಹೆಸರೇ ಬಾಯಿಗೆ ಬರುತ್ತದೆ. ಇವೆಲ್ಲಕ್ಕೂ ನಿನ್ನ ಸದ್ಗುಣಗಳೇ ಕಾರಣ. ಯಾಕಂದರೆ ನಾನಾಗಲಿ ನಿನ್ನ ಅಣ್ಣಂದಿರಾಗಲಿ ಊಟದ ಸಮಯಕ್ಕೆ ಮನೆಗೆ ಬಂದೊಡನೆಯೆ ನೀನು ಕೂಡಲೇ ಜಳಕಕ್ಕೆ ನೀರು ಕೊಟ್ಟು, ಮಣೆಹಾಕಿ ತಂಬಿಗಿ ಥಾಲಿಯನ್ನು ಸ್ವಚ್ಛವಾಗಿ ಬೆಳಗಿ ನೀರನ್ನು ಸೋಸಿ ತುಂಬಿಟ್ಟು, ತಾಟು ಒರಿಸಿ ನಗೆ

ಮುಖದಿಂದ ಊಟಕ್ಕೆ ಬಡಿಸುತ್ತಿದ್ದೆ. ಊಟ ತೀರುವವರೆಗೂ ನಮ್ಮ ಪಕ್ಕದಲ್ಲಿ ನಿಂತು ಮೇಲಿಂದ ಮೇಲೆ ಕೇಳಿ ನಮಗೆ ಬೇಡಿದ್ದನ್ನು ಬಡಿಸುತ್ತಿದ್ದೆ. ಊಟ ಮುಗಿದ ಕೂಡಲೇ ಕೈವಸ್ತ್ರವನ್ನು ಕೊಟ್ಟು ತಾಂಬೂಲವನ್ನು ತಯಾರಮಾಡಿ ಕೊಡುತ್ತಿದ್ದೆ. ಇದರಂತೆ ಮನೆಗೆ ಬರಹೋಗುವವರೆಲ್ಲರ ಆದರಾತಿಥ್ಯವನ್ನು ನೀನೇ ಮಾಡುತ್ತಿದ್ದೆ. ಈ ನಿನ್ನ ನೀತಿ ನಡುವಳಿಕೆಗಳು ನಮ್ಮೆಲ್ಲರಿಗೂ ನೆನಪಾಗಹತ್ತಿ ಎಲ್ಲರೂ ನಿನ್ನನ್ನು ಹಗಲಿರುಳು ನೆನಿಸುತ್ತಿರುವೆವು.

ನೀನು ಪತಿಯ ಮನೆಯಲ್ಲಿ ಅಚ್ಚುಮೆಚ್ಚಿನ ಸೊಸೆಯಾಗಿಯೂ ಪತಿಯ ಇಚ್ಛೆಯಂತೆ ಸತಿಯಾಗಿಯೂ, ಬಾಳಬೇಕು. ತವರು ಮನೆಗೆ ಕೀರ್ತಿ ಗೌರವಗಳನ್ನು ಹೆಚ್ಚಿಸಬೇಕೆಂದು ಲೆಕ್ಕವಿಲ್ಲದಷ್ಟು ಆಶೆ ಆಕಾಂಕ್ಷೆಗಳನ್ನು ನಾವು ನಮ್ಮ ಮನಸ್ಸಿನಲ್ಲಿಟ್ಟುಕೊಂಡಿದ್ದಾಗ್ಯೂ, ಇಷ್ಟು ದಿವಸಗಳಿಂದ ಹೊತ್ತು ಹೆತ್ತು ಸಾಕಿ ಸಲುಹಿ ಆಶೆಯ ಗೋಪುರವ ಕಟ್ಟಿಕೊಂಡಿದ್ದ ನಾವು ಈಗ ನಿನ್ನನ್ನು ಅಗಲಬೇಕಾದರೆ ಪರಮ ದುಃಖವಾಯಿತು. ಆದರೂ ಕಳುಹಿಸಿ ಕೊಡಲೇಬೇಕು. ಹಾಗೆ ಕಳುಹಿಸಿ ಕೊಡುವುದರಿಂದಲೇ ಮನೆತನದ ಗೌರವ ಪ್ರತಿಷ್ಠೆ ಹೆಚ್ಚುತ್ತವೆ. ಹಡೆದ ಕರುಳಿನ ಮಮತೆ ಅಷ್ಟು ಸುಲಭವಾಗಿ ನಿನ್ನನ್ನು ಮನೆಯಿಂದ ಕಳುಹಿಸಿಕೊಡಲು ಒಪ್ಪಲಿಲ್ಲವಾದರೂ ಮನಸ್ಸಿನ ದುಃಖವನ್ನು ಉಪಾಯವಿಲ್ಲದೆ ಸಹಿಸಿಕೊಂಡು ಕಳುಹಿಸಿಕೊಡಬೇಕಾಯಿತು. ನಿನಗೂ ಆ ಸಮಯದಲ್ಲಿ ಉಂಟಾದ ದುಃಖವು ವರ್ಣನಾತೀತವಾದದ್ದು. ಆದರೆ ಉಪಾಯವಿಲ್ಲದೆ ಹೊರಡಲೇ ಬೇಕಾಯಿತು ನಿನ್ನ ದುಃಖವನ್ನು ಹಿಡಿತದಲ್ಲಿಟ್ಟುಕೊಂಡು ನಿನ್ನ ತಾಯಿ ಅಕ್ಕ-ತಂಗಿ ಅಣ್ಣ-ತಮ್ಮಂದಿರನ್ನು ನೀನೇ ಸಂತೈಸಿ ಅವರೆಲ್ಲರನ್ನು ಸಮಾಧಾನಗೊಳಿಸಿ ನೀನು ಹೊರಡುವಾಗ ನಿನ್ನ ಬಾಲ್ಯದ ಗೆಳತಿಯರೂ, ನೆರೆಹೊರೆಯ ಆಪ್ತೇಷ್ಟರೂ ಬಂದು ಸುಗುಣೆಯಾದ ನಿನ್ನನ್ನು ಅಗಲಬಾರದ ವ್ಯಥೆಯಿಂದಲೇ ಸ್ತಂಭಿತರಾದರು. ಆ ಸಮಯದಲ್ಲಿ ಎಲ್ಲ ಜನರು ಒಟ್ಟುಗೂಡಿ ನಿನ್ನನ್ನು ಕಳುಹಿಸಿಕೊಡುವಾಗ್ಗೆ ಎಲ್ಲರನ್ನು ಅಗಲಬಾರದ ಮನಸ್ಸಿ

ನಿಂದ ನಿನ್ನ ಕಂಠವು ಉಬ್ಬಿ ಗದ್ಗದಿತವಾದಾಗ, ತುಂಬಿದ ಕಣ್ಣುಗಳಿಂದ ಮೌನ ದೃಷ್ಟಿಯಿಂದ ಒಮ್ಮೆ ಎಲ್ಲರನ್ನೂ ನೋಡಿ, ಎಲ್ಲರ ಆಜ್ಞೆಯನ್ನು ಕೇಳಿ, ಎಲ್ಲರ ಆಶೀರ್ವಾದಗಳನ್ನು ಮುಡಿಯಲ್ಲಿ ಧರಿಸಿಕೊಂಡು, ತಂದೆ-ತಾಯಿ ಗುರುಹಿರಿಯರಿಗೆಲ್ಲ ನಮಸ್ಕರಿಸಿ, ಮನಸ್ಸನ್ನು ಗಟ್ಟಿಮಾಡಿಕೊಂಡು ನಿನ್ನ ಅತ್ತೆ-ಮಾವಂದಿರ ಬಳಗದ ಹಿಂದೆ ನೀನು ಪಯಣ ಮಾಡಿದ ನೆನವು ನನ್ನ ಮನಃಪಟಲದ ಮೇಲೆ ಅಚ್ಚೊತ್ತಿದಂತೆ ನಿಚ್ಚಳವಾಗಿ ಮೂಡಿದ್ದು ಅದೆಂದೂ ಮಾಜದು.

ಮಗಳೇ ! ನೀನು ನಮ್ಮ ಮನೆಯಲ್ಲಿ ನಮ್ಮೆಲ್ಲರ ಸೇವೆಯನ್ನು ಯಾವ ಪ್ರಕಾರ ಮಾಡುತ್ತಿದ್ದೆಯೋ ಅದರಂತೆ ನಿನ್ನ ಪತಿದೇವನ ಹಾಗೂ ಅತ್ತೆ ಮಾವಂದಿರ, ಭಾವ-ಮೈದುನರ ಬಂಧು, ಬಳಗದವರ ಸೇವೆಯನ್ನು ಮಾಡು. ಅತಿಥಿಗಳು ಬಂದಾಗ ಭಕ್ತಿ ಭಾವದಿಂದ ಆದರಿಸು.

ನಿನ್ನ ಗಂಡನಾಜ್ಞೆಯನ್ನು ಮೀರದೆ |
ಗಂಗಾಧರನ ಸೇವೆಯನು ನಡೆಸು ತಪ್ಪದೆ |
ಅತ್ತೆ-ಮಾವ ಬಂಧು ಬಳಗದವರ ಸೇವೆಯೇ |
ಸತ್ಯಶಿವನ ಸೇವೆಯೆಂದು ತಿಳಿದು ಮಾಡವ್ವ ||
ಅತ್ತಲಿತ್ತ ಗೊತ್ತುಗೆಟ್ಟು ಹರಿವ ಮನವನು |
ಇತ್ತ ಲಿಂಗದಲ್ಲಿ ಇಟ್ಟು ಫಲಿಸು ತನುವನು |
ನೆರೆಹೊರೆಯ ಸಿರಿಯ ಕಂಡು ಹೊಟ್ಟೆ ಕಿಚ್ಚಿಲಿ |
ಮೇರೆದಪ್ಪಿ ಮನವು ಕೊರಗದಂತೆ ವಿರತಿಲಿ ||
ನಡಿಯೌ ನಿಜಮತಿಗೆ ಪತಿಗೆ ತಕ್ಕ ನಡೆಯಲಿ |
ಬಿಡದೆ ಸಾಂಬಶಿವನ ಧ್ಯಾನವಿರಲಿ ಮನದಲಿ ||

ನಿನ್ನ ಅತ್ತೆಯ ಮನೆಯಲ್ಲಿ ಮುದ್ದಿನ ಗಿಳಿಯಾಗು. ನಿನ್ನ ಮುದ್ದು ಮಾತುಗಳಿಂದ ಎಲ್ಲರಿಗೂ ಆನಂದವನ್ನುಂಟುಮಾಡು.

ನಿನ್ನನ್ನು ಕಳುಹಿಸಲಿಕ್ಕೆ ಬಂದ ನಿನ್ನ ಮ್ಮ, ಅಕ್ಕ, ಅಂಣ, ಮತ್ತು ಉಳಿದ ಪರಿಸೇವಕರೆಲ್ಲರೂ ನಿನ್ನನ್ನು ಅಗಲಿ ಬರುವಾಗ್ಗೆ ಅವರಿಗಿಂತಲೂ ನಿನಗೆ ಕಡುದುಃಖವಾಗಿರಬಹೆದು. ಕಣ್ವಋಷಿಗಳು ತನ್ನ ಸಾಕುಮಗಳಾದ ಶಕುಂತಲೆಯನ್ನು ಗಂಡನ ಮನೆಗೆ ಕಳುಹಿಸಿ ಬರುವಾಗ್ಗೆ ತನ್ನ ಪರಿಜನರ ಅಗಲುವಿಕೆಯಿಂದ ಅವಳಿಗೆ ಎಷ್ಟು ದುಃಖವಾಗಿರುವುದೋ ಅಷ್ಟೇ ದುಃಖವು ನಿನಗೂ ಆಗಿರಬಹುದಲ್ಲವೇ ? ಮಗಳೇ ! ಮಾಡುವದೇನು? ಹೆಣ್ಣು ಮಕ್ಕಳನ್ನು ಕೊಟ್ಟ ಮನೆಗಲ್ಲದೆ ಹುಟ್ಟಿದ ಮನೆಯಲ್ಲಿ ಇಟ್ಟು ಕೊಳ್ಳಲಿಕ್ಕಾಗುವುದೇ ? ಇಲ್ಲ. ನಮ್ಮೆಲ್ಲರ ಅಗಲುವಿಕೆಯಿಂದ ಆಗುತ್ತಿರುವ ದುಃಖವನ್ನು ನಿನಗೆ ಸಾಧ್ಯವಿರುವ ಮಟ್ಟಿಗೆ ಸಹಿಸಿಕೊಳ್ಳಲಿಕ್ಕೇಬೇಕು. ಈ ತರದ ದುಃಖವು ನಿನಗೊಬ್ಬಳಿಗೇ ಅಲ್ಲ, ಗಂಡನ ಮನೆಗೆ ಹೋಗುವ ಎಲ್ಲ ಹೆಣ್ಣು ಮಕ್ಕಳಿಗೂ ಉಂಟೇ ಉಂಟು. ಆದಕಾರಣ ನಮ್ಮೆಲ್ಲರನ್ನು ನೆನಿಸಿಕೊಂಡು ದುಃಖಿಸುತ್ತ ಕೂಡ್ರಬೇಡ. 'ನನ್ನ ಅಂಣ ತಮ್ಮಂದಿರು' ಅಕ್ಕ-ತಂಗಿಯರು ಹೇಗಿರುವರೋ ಏನೋ ಅವರನ್ನು ಯಾವಾಗ ನೋಡು ವೆನೋ, ನನ್ನ ತಂದೆ ತಾಯಿಗಳ ಬಳಿಗೆ ಯಾವಾಗ ಹೋಗುವೆನೋ ಎಂದು ಚಿಂತಿಸಬೇಡ. ನೀನು ನಿಜವಾಗಿ ಸ್ತ್ರೀ-ರತ್ನವಾಗಬೇಕಾದರೆ ಕೆಳಗೆ ಬರೆದ ವಚನದಂತೆ ನಡೆ.

ಅತ್ತೆ ಮಾವಂದಿರೇ ತಾಯ್ತಂದೆ ಸರಿಯೌ |
ಅತ್ತಿಗೆ ನಾದಿನಿಯರು ಭಗಿನಿಯರೇ ಸರಿಯೌ ||
ಮತ್ತೆ ನೆಗೆಯಣ್ಣೆಯರು ಕೇಳ್ನಿನ್ನ ಸರಿಯೌ ||
ಅರ್ತಿಯಿಂದಾದರಿಸಿ ಸಮಭಾವನರಿಯೌ ||

ನಿನ್ನ ಅತ್ತೆ-ಮಾವಂದಿರನ್ನು ನಿನ್ನ ಹೆತ್ತ ತಾಯಿ-ತಂದೆಗಳೆಂದೂ ನಿನ್ನ ಭಾವ ಮೈದುರನ್ನು ಅಂಣ ತಮ್ಮಂದಿರೆಂದೂ, ನಿನ್ನ ನಾದಿನಿ ನೆಗೆಂಣೆ ಯರನ್ನು ಅಕ್ಕ ತಂಗಿಯರೆಂದೂ ತಿಳಿ. ಮತ್ತು ನಿನ್ನ ಪತಿಯನ್ನು ದೇವ ರೆಂದು ಭಾವಿಸು ಅವರೆಲ್ಲರ ಸೇವೆಯನ್ನು ಮನಮುಟ್ಟಿ ಮಾಡು. ಅವರ

ಪ್ರೇಮಕ್ಕೆ ಪಾತ್ರಳಾಗು. ಅಂದರೆ ಇತ್ತ ಕಡೆಯು ನಮ್ಮ ಚಿಂತೆ ದೂರಾಗುವದು. ಕೆಳಗೆ ಬರೆದ ಬುದ್ಧಿಯ ಮಾತುಗಳನ್ನಾಲಿಸು

ಬುದ್ಧಿಯ ಮಾತು ಹೇಳಿದರೆ ಕೇಳಬೇಕಮ್ಮ।
ಮನಶುದ್ಧವಾಗಿ ಗಂಡನೊಡನೆ ಬಾಳಬೇಕಮ್ಮ।
ಅತ್ತೆ ಮಾವಗಂಜಿಕೊಂಡು ನಡೆಯಬೇಕಮ್ಮ।
ಚಿತ್ತದೊಲ್ಲಭನ ಅಕ್ಕರೆಯ ಪಡೆಯಬೇಕಮ್ಮ॥
ಹೊತ್ತು ಹೊತ್ತಿಗೆ ಮನೆಯ ಕೆಲಸ ಮಾಡಬೇಕಮ್ಮ।
ಹತ್ತು ಮಂದಿ ಒಪ್ಪುವ ಹಾಗೆ ನಡೆಯಬೇಕಮ್ಮ।
ಕೊಟ್ಟೆಂಬುವ ನೆಂಟರೊಡನೆ ದ್ವೇಷ ಬೇಡಮ್ಮ।
ಅಟ್ಟೆಂಬುವ ಕಾಲದಲಿ ಕೆಟ್ಟನುಡಿ ಆಡಬೇಡಮ್ಮ।
ಬಿಟ್ಟು ಮನೆ ಹೊರಗೆ ತಿರುಗಬೇಡಮ್ಮ।
ಸಿಟ್ಟು ಬರೆ ಸಹಿಸು ತಾಯಮ್ಮ।
ಗರುವ ಕೋಪ ಮತ್ಸರಂಗಳ ಮಾಡಬೇಡಮ್ಮ।
ಪರರ ನಿಂದಿಪ ಹೆಂಗಳೆಯರೊಡನಾಡಬೇಡಮ್ಮ।
ಗುರು ಪುರಂದರ ವಿಠಲನ ಸ್ಮರಣೆ ಮರೆಯಬೇಡಮ್ಮ॥

ಇದರಂತೆ ನೀನು ನಡೆದು ಧನ್ಯಳಾಗು, ಪಾವನಳಾಗು, ಧ್ರುವತಾರೆಯಾಗು ಎಂದು ಆಶಿಸುವ.

ನಿನ್ನ ಹಿತಚಿಂತಕ
—ತಂದೆ

(ಆತ್ಮವಿಚಾರ)

# ೧೦

# ಸ್ತ್ರೀಯರ ವಿಷಯದಲ್ಲಿ ಬಹುಜಾಗರೂಕರಾಗಿರಲು ಸುಭಾಷಿತಕಾರರು ಮಾಡಿದ ಉಪದೇಶ



ವರಂ ವೇಶ್ಯಾ ಪತ್ನೀನ ಪುನರವಿನೀತಾ ಕುಲವಧೂಃ |
ಉನ್ಮತ್ತಳಾದ ಕುಲೀನ ಸ್ತ್ರೀಯಳಗಿಂತ ಒಬ್ಬ ವೇಶ್ಯೆಯನ್ನೇ ವರಿಸುವುದು ಲೇಸು ||

'ಸ್ತ್ರೀ ಬುದ್ಧಿಃ ಪ್ರಳಯಾಂತಕಃ'

'ಭ್ರಮನ್ ಸಂಪೂಜ್ಯತೇ ರಾಜಾ ಸ್ತ್ರೀಭ್ರಮಂತೀ ವಿನಶ್ಯತಿ'

ಋಣಕರ್ತಾ ಪಿತಾ ಶತ್ರುಃ ಮಾತಾಚ ವ್ಯಭಿಚಾರಿಣೀ |
ಅವಿನೀತಾ ರಿಪುರ್ಭಾರ್ಯಾ ಪುತ್ರಃ ಶತ್ರುರ ಪಂಡಿತಃ ||

ಸಾಲಮಾಡಿದ ತಂದೆ ಶತ್ರು, ವ್ಯಭಿಚಾರಿಣಿಯಾದ ತಾಯಿ ಶತ್ರು, ಉನ್ಮತ್ತಳಾದ ಹೆಂಡತಿ ವೈರಿ, ದಡ್ಡ ಮಗ ವೈರಿ.

'ದೀಪ ಜ್ವಾಲೇವ ಗೃಹಿಣಿ' ಹೆಂಡತಿಯೆಂದರೆ ದೀಪದುರಿಯುದ್ದಂತೆ ಆರಿಸಿದರೆ ಮನೆ ಕತ್ತಲಾಗುತ್ತದೆ. ಏರಿಸಿದರೆ ಮನೆಯೇ ಸುಡುತ್ತದೆ; ಆದ್ದರಿಂದ ಯಥಾಯೋಗ್ಯವಾಗಿಯೇ ಅವಳನ್ನು ನೋಡಿಕೊಳ್ಳಬೇಕು.

ಮುಂತಾಗಿ ಹಲವಾರು ರೀತಿಯಿಂದ ಭಿನ್ನ ಭಿನ್ನ ಸ್ತ್ರೀಸ್ವಭಾವದ ಏರುಪೇರುಗಳನ್ನು ಹುಳುಕು ಕೊಳಕುಗಳನ್ನು ತೆರೆದು ತೋರಿದ್ದಾರೆ.

ಕೆಲಕೆಲವು ಸುಭಾಷಿತಕಾರರು "ನಾರ್ಯಾಃ ಸ್ಮಶಾನ ಘಟಿಕಾ

ಇವವರ್ಜನೀಯಾಃ” ಸುಡುಗಾಡಿನಲ್ಲಿಯ ಗಡಿಗೆಯಂತೆ ಹೆಣ್ಣು ಮಕ್ಕಳನ್ನು ಬಿಟ್ಟು ಬಿಡಬೇಕೆಂದು ಅತಿಯಾಗಿ ಹೀಗಳೆದಿದ್ದರೂ ಅವರ ಗುಣಗಳನ್ನು ಗೌರವಿಸಿ ಮಣಿಮಾಣಿಕ್ಯವೆಂದು ಮನ್ನಿಸಿ ಮರ್ಯಾದಿಸಿದ ಕವಿಗಳಿಗೂ ಸಂಸ್ಕೃತದಲ್ಲಿ ಕೊರತೆಯಿಲ್ಲ. 'ಅಸಾರೆ ಖಲು ಸಂಸಾರೆ ಸಾರಂ ಸಾರಂಗಲೋಚನಾ” ನಿಸ್ಸಾರ ಸಂಸಾರದ ಸಾರಸರ್ವಸ್ವವೆಂದರೆ ಸ್ತ್ರೀಯೆಂದು ಒಬ್ಬ ಕವಿ ಹಾಡಿದನೆ

“ಸಾರಮಾ ನ ರಮಾ ರಮಾ” ಅನುಕೂಲಳಾದ ಹೆಂಡತಿಯೇ ಲಕ್ಷ್ಮೀ ಎಂದು ಮಗುದೊಬ್ಬ ರಸಿಕ ಕವಿ ಹೆಣ್ಣಿನ ಹಿರಿಗುಣಕ್ಕೆ ಹಣೆ ಮಣಿದು ಬಾಯಿತುಂಬ ಹೊಗಳಿದ್ದಾನೆ.

ನ ಗೃಹಂ ಗೃಹಮಿತ್ಯಾಹುರ್ಗೃಹಿಣೀ ಗೃಹಮುಚ್ಯತೇ ||

ನಿಜವಾದ ಮನೆಯೆಂದರೆ ಕಲ್ಲು ಕಂಬ ಗಚ್ಚು ಗೋಡೆಗಳಲ್ಲ. ಹೆಂಡತಿಯೇ ವಾಸ್ತವವಾಗಿ ಮನೆ. ಗೃಹಿಣಿಯೆ ಗೃಹ. ಗೃಹಿಣಿಯಿಲ್ಲದ ಗೃಹ-ಮನೆಯುವಳಿಲ್ಲದ ಮನೆ-'ಕಾಂತಾರಾದ ತಿರಿಚ್ಯತೇ' ಕಾಡಿಗಿಂತ ಕಡೆ.

'ಕಾರ್ಯೇಷು ಮಂತ್ರೀ ಕರಣೇಷು ದಾಸೀ ಭೋಜ್ಯೇಷು ಮಾತಾ ಶಯನೇಷು ರಂಭಾ'

ಕಾರ್ಯಗಳಲ್ಲಿ ಮಂತ್ರಿ, ಸೇವೆಯಲ್ಲಿ ದಾಸಿ, ಉಣಿಸುವದರಲ್ಲಿ ತಾಯಿ, ತಣಿಸುವದರಲ್ಲಿ ರಂಭೆ ಇಂಥ ಚತುರಸ್ರವಾದ ಚೆಲುವಿಕೆಯಿಂದ ಒಡಗೂಡಿದ ಚತುರ ಪತ್ನಿ 'ನಾಲ್ಪಸ್ಯ ತಪಸಃಫಲಮ್' ತುಸು ತಪಸ್ಸಿನ ಫಲವಲ್ಲ. ಅಖಂಡ ಪುಣ್ಯರಾಶಿಯ ಪರಿಣಾಮವೆಂದು ಹೇಳಿ ಸುಭಾಷಿತ ಕಾರರು ಗರತಿಯರ ಗೌರವದಗುರುತುಗಳನ್ನು ಅರ್ಥಪೂರ್ಣವಾಗಿ ಸೂಚಿಸಿದ್ದಾರೆ. ಇನ್ನೊಂದು ಸುಭಾಷಿತದಲ್ಲಿ ಸ್ತ್ರೀಯರಿಗೆ ಮನೆಯಹೊರಗೆ ಹೆಜ್ಜೆ ಇಡುವುದೆಂದರೆ ಹಾವಿನಹೆಡೆಯೇರಿದಂತೆ! ಬೇರೆ ಮನೆಯೆಂದರೆ ದ್ವೀಪಾಂತರ ವಿದ್ದಂತೆ ಅವರ ಮಾತು ಜಿಪುಣನ ದ್ರವ್ಯದಂತೆ ಯಾರಿಗೂ ದೊರಕದು.

ಅವರಿಗೆ ಪರ ಪುರುಷನೆಂದರೆ ಚೌತಿ ಚಂದ್ರನಂತೆ ನೋಡಲಿಕ್ಕೆ ಅನರ್ಹನು.

ಇಂತೆಲ್ಲ ಗರತಿಯರ ಗುಣಗಳಿಂದ ಗೌರಿ ಗಂಗೆಯರಂತೆ ಗೌರವದ ಗದ್ದುಗೆಯನ್ನು ಏರಿ ಜಗದ್ವಂದ್ಯೆಯರಾದ ನಾರಿಯರು "ದೇವತಾ ಸಾನ ಮಾನುಷೀ" ಮಾನವರಲ್ಲಿ ಸಾಕ್ಷಾತ್ ದೇವತೆಯೇ ಸರಿಯೆಂದು ಮುಕ್ತ ಕಂಠದಿಂದ ಹೊಗಳಿದ್ದಾರೆ; ಇರಲಿ,



೧೧

# ಶಿವಶರಣೆ ಲಕ್ಕಮ್ಮ



ಸತಿಪತಿಗಳೊಂದಾದ ಭಕ್ತಿ
ಹಿತವಾಗಿಪ್ಪುದು ಶಿವಂಗೆ,
ಸತಿ ಪತಿಗಳೊಂದಾಗದ ಭಕ್ತಿ
ಅಮೃತದೊಳು ವಿಷ ಬೆರಸಿದಂತೆ
ಕಾಣಾ ರಾಮನಾಥಾ"

ಶಿವನ ಪ್ರೀತಿಯನ್ನು ಸಂಪಾದಿಸಬೇಕಾದರೆ ಸತಿ–ಪತಿಗಳ ಭಕ್ತಿ ಸಮರಸವಾಗಬೇಕು. ಇಲ್ಲದಿದ್ದರೆ ಹಾಲಿನಲ್ಲಿ ಉಪ್ಪು ಬೆರದಂತೆ ಹಾನಿ ಕರವಾಡುದು.

ಸಂಸಾರವು ಹಲವು ಎಡರುತೊಡರುಗಳಿಂದ ಕೂಡಿದೆ ಇಂಥ ಕಷ್ಟ–ನಷ್ಟಗಳಿಗೆ ಎದೆಗುಂದದೆ ಮಾನವನು ಮುನ್ನುಗ್ಗಬೇಕಾದರೆ ಆದರ್ಶ ವ್ಯಕ್ತಿಗಳ ಜೀವನದ ಅಭ್ಯಾಸವು ಅತ್ಯವಶ್ಯ. ಅವರ ಆಚರಣೆಯು ಅನು ಕರಣವು ಮುಖ್ಯವು.

ನಮ್ಮೀ ಕನ್ನಡನಾಡಿನಲ್ಲಿ ಬಸವಣ್ಣ, ಚೆನ್ನಬಸವಣ್ಣ, ನೂಲಿಯ ಚಂದಯ್ಯ, ಮಡಿವಾಳ ಮಾಚಿತಂದೆ, ದೇವರ ದಾಸಿಮಯ್ಯ, ಮೋಳಿಗೆ ಮಾರಯ್ಯ, ಮೊದಲಾದ ಶಿವಶರಣರು ಬಾಳಿಬೆಳಗಿದಂತೆ ಸತ್ಯಕ್ಕ, ರೇವವ್ವ ರೇಕಮ್ಮ, ಗಂಗಮ್ಮ, ವೀರಮ್ಮ, ಗುಡ್ಡವ್ವ, ಮುಕ್ತಾಯಕ್ಕ, ಅಕ್ಕಮ

ಹಾದೇವಿ ಮೊದಲಾದ ಶಿವಶರಣೆಯರೂ ಬಾಳಿ-ಬೆಳಗಿ ಮುಕ್ತಿಯನ್ನು ಹೊಂದಿದ್ದಾರೆ. ಇಂಥ ಶಿವಶರಣೆಯರಲ್ಲಿ ಲಕ್ಕಮ್ಮನೂ ಒಬ್ಬಳಾಗಿದ್ದಾಳೆ.

ಉಳಿದ ಶಿವಶರಣೆಯರಂತೆ ಲಕ್ಕಮ್ಮನೂ ಮಾರಯ್ಯ ಪ್ರೀಯ ಅಮುಳೇಶ್ವರಲಿಂಗ ಎಂಬ ಅಂಕಿತದಿಂದ ವಚನಗಳನ್ನು ರಚಿಸಿ ಕನ್ನಡ ನುಡಿಗೆ ಸೇವೆಯನ್ನುಸಲ್ಲಿಸಿದ ಅಪ್ರತಿಮ ವಚನಗಾರ್ತಿಯಾಗಿದ್ದಾಳೆ ೧೨ನೆಯ ಶತಮಾನದಲ್ಲಿ ಕಲ್ಯಾಣ ಭೂ ಕೈಲಾಸವಾಗಿತ್ತು. ಅಸಂಖ್ಯಾತ ಶಿವಭಕ್ತರ ತವರುಮನೆಯಾಗಿತ್ತು. ಅಲ್ಲಿಯ 'ಅನುಭವ ಮಂಟಪ'ವು ಶಿವಾನುಭವಿಗಳ ಸಮಿತಿಯಂತಿದ್ದಿತು. ಅದರಲ್ಲಿ ಶರಣ ಶರಣೆಯರೆಲ್ಲರೂ ಒಟ್ಟಿಗೆ ಸೇರಿ ಆಧ್ಯಾತ್ಮ ಚರ್ಚೆಯನ್ನು ಮಾಡುತ್ತಿದ್ದರು ನುಡಿದಂತೆ ನಡೆಯುವ ಕಾಯಕವೇ ಕೈಲಾಸವೆಂದು ನೆರೆನಂಬಿದ ಆ ಮಹಾಶರಣರಲ್ಲಿ ಮಾರಯ್ಯನವರೂ ಒಬ್ಬರಾಗಿದ್ದರು. ನುಲಿಯ ಚೆಂದಯ್ಯಗಳು ಹಗ್ಗಗಳನ್ನು ಹೊಸೆದು, ಮೋಳಿಗೆಯ ಮಾರಯ್ಯಗಳು ಕಟ್ಟಿಗೆಗಳನ್ನು ತಂದು, ಸಂಗಯ್ಯಗಳು ವೈದ್ಯವನ್ನು ಮಾಡಿ ಬಂದಹಣದಿಂದ ನಿತ್ಯವೂ ಜಂಗಮ ತೃಪ್ತಿಯನ್ನು ದಾಸೋಹವನ್ನು ನಡೆಸುತ್ತಿದ್ದರು. ಪ್ರತಿನಿತ್ಯವೂ ಶಿವಭಕ್ತರ ಮನೆಯ ಮುಂದಿನ ಅಂಗಳದಲ್ಲಿ ಬಿದ್ದ ಅಕ್ಕಿಗಳನ್ನು ಆಯ್ದು ತಂದು ಅದರಿಂದಲೇ ಜಂಗಮ ಸಂತೃಪ್ತಿಯನ್ನು ಮಾಡುವ ಕಾಯಕ ಮಾರಯ್ಯನವರದಾಗಿತ್ತು. ಅಂತೆಯೇ ಅವರನ್ನು ಶಿವ ಶರಣರು 'ಆಯ್ದಕ್ಕಿ ಮಾರಯ್ಯ' ನೆಂದು ಕರೆಯುತ್ತಿದ್ದರು. ನಮ್ಮ ಮಹಾ ಶರಣೆ ಲಕ್ಕಮ್ಮ ಈ ಮಾರಯ್ಯನವರಿಗೆ ಅನುರೂಪಳಾದ ಸತಿಯಾಗಿದ್ದಳು. ದೇವರದಾಸಿಮಯ್ಯ ಹೇಳಿದಂತೆ ಹಾಲಿನಲ್ಲಿ ಸಕ್ಕರೆ ಬೆರೆತಂತೆ ಈ ಸತಿ ಪತಿಗಳ ಭಕ್ತಿ ಶಿವನಿಗೆ ಹಿತವಾಗಿತ್ತು.

ಲಕ್ಕಮ್ಮನ ದಾಸೋಹಂಭಾವವು ನೈಷ್ಠಿಕವಾಗಿತ್ತು. ಅವಳ ಕಾಯಕ ಪರಿಶುದ್ಧವಾಗಿತ್ತು. ಭಾವಶುದ್ಧವಿಲ್ಲದೆ ಭಕ್ತಿಯಿಂದ ದೇವನೊಲಿಯನೆಂಬು ದನ್ನು ಅರಿತು ಆಚರಿಸುತ್ತಿದ್ದಳವಳು.

ಸತಿ-ಪತಿಗಳ ಜೀವನ ಪರಸ್ಪರ ಪೂರಕವಾಗಿರಬೇಕು. ಪತಿಯು

ಸತಿಗೆ ಪ್ರಾಣವಾಗಿದ್ದಂತೆ ಸತಿಯೂ ಪತಿಯ ಜೀವನದ ದಾರಿದೀಪ, ವೀರ ಶೈವರಲ್ಲಿ ಸತಿ-ಪತಿಗಳೀರ್ವರೂ ಸಮಾನರು ಶಿವನ ಭಕ್ತಿಯನ್ನು ಮಾಡುವಲ್ಲಿ ಹೆಣ್ಣುಗಂಡೆಂಬಭೇದ ಬಾಧಕವು. ಪತಿಯಂತೆ ಸತಿಯೂ ಸನ್ಮಾರ್ಗದಲ್ಲಿ ನಡೆಯುವದು ಸಹಜ. ಆದರೆ ಮಾರ್ಗದಪ್ಪಿದಲ್ಲಿ ಪತಿಯನ್ನು ಹಿತವಾಗಿಯೂ ಮಿತವಾಗಿಯೂ ಸನ್ಮಾರ್ಗದತ್ತ ಒಲಿಸಿದ ಸತಿಶಿರೋಮಣಿಗಳು ದೊರಕು ವದು ಅಪರೂಪ. ಅಂಥವಹರಲ್ಲಿ ನಮ್ಮ ಲಕ್ಕಮ್ಮ ಅಗ್ರಗಣ್ಯಳೆಂದು ಹೇಳಿ ದರೆ ಅತಿಶಯೋಕ್ತಿಯೇನೂ ಆಗದು.

ಒಂದು ದಿನ ಮಾರಯ್ಯನವರು ಬಸವಣ್ಣನವರ ಅಂಗಳದಿಂದ ದಿನಕ್ಕಿಂತಲೂ ಹೆಚ್ಚು ಅಕ್ಕಿಯನ್ನು ಆಯ್ದು ತಂದದ್ದನ್ನು ಕಂಡು ಲಕ್ಕಮ್ಮ ಮನನೊಂದು 'ಪತಿದೇವಾ' ಆಶೆಯಿಂದ ಕೂಡಿದ ಭಕ್ತಿ ಲಿಂಗಕ್ಕೆ ಸಲ್ಲು ವದಿಲ್ಲ. ಹೆಚ್ಚಿನ ಅಕ್ಕಿಯನ್ನು ಅಲ್ಲಿಯೇ ಚೆಲ್ಲಿಬನ್ನಿರಿ. ನಾಲ್ಕು ಅಕ್ಕಿಯ ಕಾಳುಗಳಿಗಾಗಿ ನಮ್ಮ ಆದರ್ಶ ಜೀವನವನ್ನು ಶುದ್ಧಕಾಯಕವನ್ನು ಹಾಳು ಮಾಡಿಕೊಳ್ಳುವದೇ ? ಎಂದು ಎಚ್ಚರಿಸುವಳು.

"ಆಶೆ ಎಂಬುದು ಅರಸಿಂಗಲ್ಲದೆ ಶಿವಭಕ್ತಗುಂಟೇ ಎಲೆ ಅಯ್ಯಾ ?
ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೆ ಎಲೆಅಯ್ಯಾ
ಈಸಕ್ಕಿಯ ಆಶೆ ನಿಮಗೇಕೆ ? ಈಶ್ವರನೊಪ್ಪ.
ಮಾರಯ್ಯಪ್ರಿಯ ಅಮಳೇಶ್ವರ ಲಿಂಗಕ್ಕೆ ದೂರ ಮಾರಯ್ಯಾ"

'ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು
ನಡೆಯಿಲ್ಲದ ನುಡಿ ಅರುವಿಂಗೆ ಹಾನಿ.
ಕೊಡದೆ ತ್ಯಾಗಿ ಎನಿಸಿಕೊಂಬುದು
ಮುಡಿಯಿಲ್ಲದ ಶೃಂಗಾರ.

ಧೃಡವಿಲ್ಲದ ಭಕ್ತಿ, ಅಡಿ ಒಡೆದ ಕುಂಭದಲ್ಲಿ

ಸುಖಜಲವನು ತುಂಬಿದಂತೆ
ಮಾರಯ್ಯಪ್ರಿಯ ಅಮುಳೇಶ್ವರ ಲಿಂಗ ಮುಟ್ಟದ ಭಕ್ತಿ
ಒಮ್ಮನವ ಮೀರಿ ಇಮ್ಮನದಲ್ಲಿ ತಂದಿರಿ

ಅಮುಳೇಶ್ವರ ಲಿಂಗಕ್ಕೆ ಸಲ್ಲದ ಬೋನವ
ಅಲ್ಲಿಯೇ ಸುರಿದು ಬನ್ನಿ ಮಾರಯ್ಯಾ!

ಹೀಗೆ ಆಶೆಯನ್ನು ವಿಡಂಬಿಸಿ ನುಡಿವ ತಮ್ಮ ಪುಣ್ಯಾಂಗನೆಯ ಅರವಿನಾಳವನ್ನು ತಿಳಿದು ಆಯ್ದಕ್ಕಿಯ ಮಾರಯ್ಯಗಳು ಬೆಚ್ಚುವರು. ದಾಸೋಹವೆಂಬ ಸೇವೆಗಿಂತಲೂ ಹೆಚ್ಚಿನ ಕೈಲಾಸವಿಲ್ಲವೆಂಬುದನ್ನೂ ಅಹಂಕಾರವಳಿದು ತ್ರಿವಿಧ ದಾಸೋಹವೇ ಲಿಂಗೈಕ್ಯವೆಂಬುದನ್ನೂ ತಮ್ಮ ಸತಿಯಿಂದ ಮಾರಯ್ಯನವರು ಮನಗಂಡರು. ದಾಸೋಹವೇ ಸಚ್ಚಿದಾನಂದ ಪರಬ್ರಹ್ಮವೆಂದು ನಿಶ್ಚೈಸಿ ತಮ್ಮ ಸತಿಯು ಹೇಳಿದಂತೆ ಹರುಷದಿಂದ ಮತ್ತೆ ಬಸವಣ್ಣನ ಅಂಗಳಕ್ಕೆ ಹೋಗಿ ಹೆಚ್ಚಿನ ತಂಡುಲಗಳನ್ನು ಅಲ್ಲಿಯೇ ಸುರಿದು ಬರುವರು.

ಲಕ್ಕಮ್ಮ-ಮಾರಯ್ಯಗಳು ಕಡು ಬಡವರೆಂದು ಭಾವಿಸಿದರೆ ತಪ್ಪಾಗುವದು. ಶಿವಭಕ್ತರಿಗೆಲ್ಲಿಯದು ಬಡತನ? ಅಚ್ಚ ಶರಣರು ಧನ-ಮನ-ಸಂಪನ್ನರು ಎಂಬ ನುಡಿಗೆ ಇವರ ಜೀವನ ಆದರ್ಶವಾಗಿತ್ತು.

ಎಂದಿನಂತೆ ಪರಿಶುದ್ಧವಾದ ಲಿಂಗ ಮೆಚ್ಚಿದ ಅವರ ಕಾಯಕ ಹವ್ಯಾಹತವಾಗಿ ನಡೆದಿತ್ತು. ಒಂದು ದಿನ ಲಕ್ಕಮ್ಮ ಬಸವಣ್ಣನ ಮಹಮನೆಯಲ್ಲಿ ನಿತ್ಯವೂ ಷಡುರಸಾನ್ನದ ಆರೋಗಣೆಯನ್ನು ಮಾಡಿ ತಣಿಯುತ್ತಿದ್ದ ಲಕ್ಷದ ಮೇಲೆ ತೊಂಬತ್ತಾರುಸಾವಿರ ಜಂಗಮರಿಗೆ ಸಂತೃಪ್ತಿಯನ್ನು ಮಾಡಿಸುವ ತನ್ನ ಬಯಕೆಯನ್ನು ಪತಿಗೆ ಹೇಳುವಳು. ಅದರಂತೆ ಆ ಅಸಂಖ್ಯಾತ ಗಣಂಗಳಿಗೆ ವಿಭೂತಿಯನ್ನು ಕೊಟ್ಟು ಬಿನ್ನಹ ಹೇಳಿ ಬರುವಂತೆ ಬಿನ್ನಯಿಸಿಕೊಳ್ಳುವಳು. ಅದನ್ನು ಕೇಳಿ ಮಾರಯ್ಯನವರಿಗೆ ಮತ್ತೆ ಅಚ್ಚರಿ

ಯಾಯಿತು, ನೂರಾರು ನೇಮ ವ್ರತಗಳುಳ್ಳ ಆ ಗಣಂಗಳನ್ನು ಬಡವರಾದ ನಾವು ತೃಪ್ತಿಬಡಿಸುವದೆಂತು ? ಎಂದು ಯೋಚಿಸಿದರು.

"ಮನ ಶುದ್ಧವಿಲ್ಲದವರಿಗೆ ದ್ರವ್ಯದ ಬಡತನವಲ್ಲದೆ
ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ
ಸದ್ಭಕ್ತಂಗೆ ಎತ್ತ ನೋಡಿದತ್ತ ಲಕ್ಷ್ಮೀ ತಾನಾಗಿಪ್ಪಳು
ಮಾರಯ್ಯಪ್ರಿಯ ಅಮಳೇಶ್ವರ ಲಿಂಗದ ಸೇವೆಯುಳ್ಳನಕ್ಕ"

ಎಂದು ಲಕ್ಕಮ್ಮ ತನ್ನ ಪತಿಯ ಮನದ ಸಂದೇಹವನ್ನು ಕಳೆದು ಅವರೆಲ್ಲರನ್ನು ಕರೆದುಕೊಂಡು ಬರಲು ಕಳುಹಿದಳು. ಪರಮಭಕ್ತೆ ಲಕ್ಕಮ್ಮ ದಿವ್ಯಜ್ಞಾನದಿಂದ ಬಸವಾದಿ ಪ್ರಮಥರ ನೇಮಗಳನ್ನು ಅರಿತು ಅವರವರ ನೇಮಕ್ಕೆ ತಕ್ಕಂತೆ ಎಲ್ಲವನ್ನು ಮಾರಯ್ಯಗಳು ಬರುವಷ್ಟರಲ್ಲಿ ಸಿದ್ಧಪಡಿಸಿದಳು

ಇತ್ತ ಮಾರಯ್ಯಗಳು ಬಸವಣ್ಣ ಮೊದಲಾದ ಪ್ರಮಥರನ್ನು ಕರೆದುಕೊಂಡು ಬಂದರು. ಎಲ್ಲರಿಗೂ ನೀರು ಕೊಟ್ಟಾಯಿತು. ಪ್ರಭುವಿನ ಪಾದಪೂಜೆಯೂ ಸಂಭ್ರಮದಿಂದ ಜರುಗಿತು. ಪಾದೋದಕವನ್ನು ಸಲ್ಲಿಸಿಯಾಯ್ತು. ನಂತರ ಸತಿ–ಪತಿಗಳು ಶರಣರೆಲ್ಲರಿಗೂ ಮನದಣಿ ಪ್ರಸಾದವನ್ನು ಎಡೆ ಮಾಡಿದರು; ಅವರವರ ನೇಮವ್ರತಗಳಿಗೆ ಚ್ಯುತಿಬಾರದಂತೆ ಇಚ್ಛಿತ ಪದಾರ್ಥಗಳನ್ನು ಅಣಿಮಾಡಿದರು. ಎಲ್ಲ ಗಣಂಗಳು ಷಡುರುಚಿಯ ಲಿಂಗಕ್ಕರ್ಪಿಸಿ ತೃಪ್ತಿ ಪಡೆದುದನ್ನು ಕಂಡು ಪ್ರಭುವಿಗೂ ಅಚ್ಚರಿಯಾಯಿತು.

ಮನೆ ನೋಡಾ ಬಡವರು ಮನ ನೋಡಾ ಸಂಪನ್ನರು
ಧನ ನೋಡಾ ಬಡವರು ಘನ ಮನ ಸಂಪನ್ನರು
ಕೂಡಲ ಸಂಗನ ಶರಣರು ಕರುಳಿಲ್ಲದ ಕಲಿಗಳು
ಆರಿಗುಪಮಿಸಬಾರದು,

ಎಂದು ಬಸವಣ್ಣನವರೂ ಆ ಸತಿ-ಪತಿಗಳ ಸೇವೆಯನ್ನು ಮನದುಂಬಿ ಹೊಗಳುವರು, ಅದನ್ನು ಕೇಳಿ ಮಾರಯ್ಯಗಳು —

ತನುವೀವಡೆ ತನುವೆನಗಿಲ್ಲ
ಮನವೀವಡೆ ಮನವೆನಗಿಲ್ಲ
ಧನವೀವಡೆ ಧನವೆನಗಿಲ್ಲ
ಇಂತೀ ತನು-ಮನ-ಧನ
ಸಕಲ ಸಂಪತ್ತುಳ್ಳ
ನಿಮ್ಮ ಶರಣರ ತಪ್ಪಲಕ್ಕಿಯನಾಯ್ದು
ತಂದು ಎನ್ನೊಡಲ ಹೊರವೆನಲ್ಲದೆ
ಅಮುಳೇಶ್ವರ ಲಿಂಗಕ್ಕೆ ನೀಡುವ ಬಯಕೆ
ಎನಗಿಲ್ಲ ಸಂಗನ ಬಸವಣ್ಣಾ !

ಎಂದು ನಿರಹಂಭಾವದಿಂದ ನುಡಿವರು. ಮನದಣಿ ಬಸವಣ್ಣನ ಸ್ತೋತ್ರವನ್ನು ಮಾಡುವರು. ನಂತರ ಮಾರಯ್ಯಗಳು ತಮ್ಮ ಭಕ್ತಿ ಪ್ರಕಟವಾಯಿತ್ತೆಂದು ಅಮುಳೇಶ್ವರ ಲಿಂಗದಲ್ಲಿ ಐಕ್ಯವಾಗುವರು. ಆಗ ಮಹಾ ಸತಿ ಲಕ್ಕಮ್ಮನೂ ತನ್ನ ಪತಿಯೊಡನೆ ಎಲ್ಲ ಪ್ರಮಥರ ಸಮುಕ್ಷಮ್ಮದಲ್ಲಿಯೇ ಲಿಂಗೈಕ್ಯ ವಾಗುವಳು.

ಇಂಥ ಮಹಾ ಶಿವಶರಣೆಯರ ಜೀವನವನ್ನು ತಿಳಿದು ಅನುಸರಿಸಿದರೆ ಪಾಮರರಾದ ನಮ್ಮ ಮಹಿಳೆಯರು ಪುನೀತರಾಗುವಲ್ಲಿ ಯಾವ ಸಂದೇಹವೂ ಇಲ್ಲ

(ಸುಕುಮಾರ)

೧೨

# ಪಂಚಸೂತಕ ವಿಚಾರ

ಆರ್ಯರೇ ! ಈ ಕರ್ಮ ಭೂಮಿಯೆಂದೆನಿಸಿದ ಭರತ ಖಂಡದಲ್ಲಿ ಬ್ರಾಹ್ಮಣಾದಿ ಸರ್ವ ವರ್ಣದವರಿಂದಲೂ ಪಂಚ ಸೂತಕವು ಆಚರಿಸಲ್ಪಡು ತಕ್ಕದಾಗಿರುವುದು. ರಜಸ್ಸೂತಕ, ಜನನಸೂತಕ, ಉಚ್ಛಿಷ್ಟ ಸೂತಕ, ಜಾತಿ ಸೂತಕ. ಪ್ರೇತಸೂತಕಗಳೆಂಬೈದು ದೋಷಗಳಿಗೆ ಪಂಚಸೂತಕಗಳೆಂದು ಹೆಸರು ಸ್ತ್ರೀಯರ ಮುಟ್ಟಿನಲ್ಲಿ ಸ್ರವಿಸುವ ರಕ್ತದೋಷಕ್ಕೆ ರಜಸ್ಸೂತಕವೆಂದೂ, ಸ್ತ್ರೀಯರ ಪ್ರಸವಾ ನಂತರ ಸ್ರವಿಸುವ ಮಲಕ್ಕೆ ಜನನ ಸೂತಕವೆಂದೂ, ಒಬ್ಬರು ತಿಂದುಳಿದನ್ನವನ್ನು ಮತ್ತೊಬ್ಬರು ತಿನ್ನುವುದೂ, ಒಂದು ಪಾತ್ರೆಯಲ್ಲಿ ಕುಡಿದುಳಿದ ನೀರನ್ನು ಮತ್ತೊಬ್ಬರು ಕಡಿಯುವುದೂ ಇವುಗಳಿಗೆ ಉಚ್ಛಿಷ್ಟ ಸೂತಕವೆಂದೂ, ಉತ್ತಮನು ಅಧಮನಲ್ಲಿಯೂ, ಸಂಸ್ಕೃತ ಶರೀರಿಯು ಅಸಂಸ್ಕೃತನಲ್ಲಿಯೂ ಭೋಜನಾದಿ ವ್ಯವಹಾರಂಗಳಂಮಾಡೋಣದರಿಂದುಂಟಾ ಗುವ ದೋಷವೇ ಜಾತಿಸೂತಕವೆಂದೂ, ಮೃತಶರೀರಕ್ಕೆ ಮತ ಪದ್ಧತಿಯಂತೆ ದಹನ ಖನನಾದ್ಯುಪರ ಕರ್ಮಗಳನ್ನೆಲ್ಲಾ ಮುಗಿಸಿದಮೇಲೆ ಆ ಮೃತಶರೀರ ಸ್ಪರ್ಶದಿಂದುಂಟಾದ ದೋಷವೇ ಪ್ರೇತ ಸೂತಕವೆಂದೂ ಹೇಳಿಸಿಕೊಳ್ಳುವವು ಈ ಪಂಚಸೂತಕಗಳನ್ನು ವೇದಶಾಸ್ತ್ರ ಪುರಾಣೇತಿಹಾಸಗಳನ್ನವಲಂಬಿಸಿ ನಡೆಯುವ ಆಸ್ತಿಕರೆಂಬುವರು ಅವರವರ ಮತಾಚಾರಕ್ಕೆ ಲೋಪ ಬರದಂತೆ ಧರ್ಮ ಶಾಸ್ತ್ರ ರೀತಿಯಾಗಿ ಆಯಾಯ ಕಾಲಕ್ಕೆ ಸಂಭವಿಸುವ ಸೂತಕಗಳ ನ್ನೆಲ್ಲ ನಿವೃತ್ತಿಗೊಳಿಸಿಕೊಂಡು ಶುದ್ಧರಾಗಬೇಕೆಂಬುವುದು ಮನುಷ್ಯ ಸಾಮಾ ನ್ಯಕ್ಕೆಲ್ಲ ಮುಖ್ಯ ಕರ್ತವ್ಯವಾಗಿದೆ. ಈ ಪಂಚ ಸೂತಕಗಳಲ್ಲಿ ರಜಸ್ಸೂತಕ

ವೆಂಬುವದು ವಿಶೇಷ ದೋಷವುಳ್ಳದೆಂದು ಕಂಡುಬರುವದು. ಉಳಿದ ಎಲ್ಲಾ ಸೂತಕಗಳಿಗಿಂತಲೂ ರಜಸ್ಸೂತಕಕ್ಕೆ ಇಷ್ಟು ನಿಷೇಧ ಬರಲು ನಿಮಿತ್ತವೇನೆಂದರೆ ಇಂದ್ರನು ತನಗುಂಟಾದ ಬ್ರಹ್ಮ ಹತ್ಯಾಂಶವನ್ನು ಸ್ತ್ರೀಯ ರಲ್ಲಿ ಮಾಸಿಕ ರಜೋರೂಪದಿಂದ ಇಟ್ಟಿರುವನಾದ್ದರಿಂದ ರಜೋವತಿಯರು ದರ್ಶನ ಸಂಭಾಷಣ ಸ್ಪರ್ಶನಾದಿಗಳಿಗೆಲ್ಲ ರಜಸ್ಸ್ರಾವವು ನಿಲ್ಲುವವರೆವಿಗೂ ಅರ್ಹರಲ್ಲವೆಂದು ವೇದದಲ್ಲಿಯೂ ಭಾಗವತದಲ್ಲಿಯೂ ಉಕ್ತವಾಗಿದೆ. ಅಂದರೆ ಸೃಷ್ಟ್ಯಾದಿಯಲ್ಲಿ ವಿಶ್ವರೂಪನೆಂಬುವನಿಗೆ ಸೋಮಪಾನ ಮಾಡುವ ಮುಖ ವೂ, ಸುರಾಪಾನ ಮಾಡುವ ಮುಖವೂ, ಅನ್ನವಂ ತಿನ್ನುವ ಮುಖವೂ, ಎಂದು ಮೂರು ಮುಖಗಳಿದ್ದವು. ಆತನು ಬ್ರಾಹ್ಮಣ ಬೀಜದಿಂದುದ್ಭವಿ ಸಿದವನಾದುದರಿಂದ ಯಜ್ಞವನ್ನುಪಕ್ರಮಿಸಿ, ಅಗ್ನಿಯಲ್ಲಿ ಆಯಾಯ ದೇವ ತಾಹ್ವಾನಗಳಿಂದ ಹವಿಃಪ್ರದಾನಮಾಡುವ ಕಾಲದಲ್ಲಿ ಬಾಯಲ್ಲಿ ಮಾತ್ರ ಗಟ್ಟಿಯಾಗಿ ಮಂತ್ರವನ್ನು ಹೇಳಿಕೊಂಡು, ಹವಿಃಪ್ರದಾನವನ್ನು ಮಾಡುತ್ತಾ; ತಾಯಿಯ ಮೇಲಣ ವಾತ್ಸಲ್ಯದಿಂದ, ರಹಸ್ಯವಾಗಿ ರಾಕ್ಷಸರಿಗೆ ಆ ಹವಿಸ್ಸಿ ನಲ್ಲಿ ಕೆಲವು ಭಾಗಗಳನ್ನು ಕೊಡುತ್ತಿರುವಲ್ಲಿ ಈತನ ಕಪಟ ಕೃತ್ಯಗಳನ್ನೆಲ್ಲಾ ಇಂದ್ರನು ತಿಳಿದು ಅತಿಶಯ ಭಯವುಳ್ಳವನಾಗಿ ಈ ಸಮಯದಲ್ಲಿ ನಾವು ಅಲಕ್ಷ್ಯವಂ ಮಾಡಿದರೆ, ರಾಕ್ಷಸರೆಲ್ಲರೂಮದವಿಶಿಷ್ಟರಾಗಿ ಅನೇಕ ಉಪಹತಿ ಗಳನ್ನು ಮಾಡುವರೆಂದು ಯೋಚಿಸಿ, ಕ್ಷಿಪ್ರದಲ್ಲಿಯೇ ಆ ಇಂದ್ರನು ಕೋಪಾ ವಿಲನಾಗಿ ವಿಶ್ವರೂಪನನ್ನು ಸಂಹರಿಸಿದನು.

ಆತನ ಸೋಮಪಾನಮಾಡುವ ಮುಖವು ಕಪಿಂಜಲ ಪಕ್ಷಿಯೂ, ಸುರಾಪಾನ ಮಾಡುವ ಮುಖವೂ ಕಲವಿಂಕ ಪಕ್ಷಿಯೂ, ಅನ್ನವಂತಿನ್ನುವ ಮುಖವು ತಿತ್ತಿರಿ ಪಕ್ಷಿಯೂ ಆದವು. ಇಂದ್ರನು ಆ ವಿಶ್ವರೂಪನ ವಧೆಯಿಂ ದುಂಟಾದ ಬ್ರಹ್ಮಹತ್ಯೆಯನ್ನು ನಿವಾರಿಸಿಕೊಳ್ಳಲಿಕ್ಕೆ ಸಮರ್ಥನಾದಾಗ್ಯೂ, ಒಂದುವರುಷದವರೆವಿಗೂ ಬ್ರಹ್ಮಹತ್ಯೆವನ್ನು ವಹಿಸಿಕೊಂಡಿದ್ದು, ಲೋಕಾಪ ವಾದವನ್ನು ಪರಿಹರಿಸಿಕೊಳ್ಳಲಿಚ್ಛೆಯುಳ್ಳವನಾಗಿ ಅಂಜಲಿಯಿಂದಬ್ರಹ್ಮಹತ್ಯವಂ ಗ್ರಹಿಸಿ ನಾಲ್ಕು ಭಾಗಮಾಡಿ ಭೂಮಿ, ವೃಕ್ಷ, ಜಲ, ಸ್ತ್ರೀ, ಇವರುಗಳಲ್ಲಿ

ಹಂಚಲಾಗಿ, ಆಗ ಭೂಮಿಯು ನನ್ನಲ್ಲಿರುವ ಗರ್ತಗಳೆಲ್ಲವೂ (ಹಳ್ಳಗಳೆಲ್ಲವೂ) ತುಂಬುವ ಪಕ್ಷದಲ್ಲಿ ಪರಿಗ್ರಹಿಸುವೆನೆಂದು ಕೇಳಿಕೊಂಡು, ವರವನ್ನು ಪಡೆದು, ಒಂದು ಭಾಗವಂ ಗ್ರಹಿಸಿತು. ಆ ದೋಷವೇ ಈಗ ಇರಿಣ (ಜವಳು) ರೂಪದಿಂದನಿಂತು ಅಧ್ಯಯನಾದಿಗಳಿಗೆ ಅಪವಿತ್ರವೆನಿಸಿದೆ. ವೃಕ್ಷಗಳು ತಮ್ಮ ಕೊಂಬೆಗಳನ್ನು ಎಷ್ಟುಸಾರಿ ಕತ್ತರಿಸಿದಾಗ್ಯೂ ವೃದ್ಧಿಯನ್ನೇ ಹೊಂದುವಹಾಗೆ ವರವಂ ದಯಪಾಲಿಸುವ ಪಕ್ಷದಲ್ಲಿ ಈ ಘೋರವಾದಂಶವನ್ನು ವಹಿಸುವೆವೆಂದು ಹೇಳಿ, ವರವಂ ಸ್ವೀಕರಿಸಿ, ಆ ಬ್ರಹ್ಮಹತ್ಯಾಂಶವನ್ನು ವಹಿಸಿದವು. ಅದೇದೋಷವು ನಿಷಿದ್ಧವಾದ ಮೇಣ (ನಿರ್‍ಯಾಸ-ಬಂಕೆ) ರೂಪದಿಂ ನಿಂತುಕೊಂಡಿದೆ. ಜಲವು ತನ್ನಲ್ಲಿ ನೀರನ್ನು ಎಷ್ಟು ಉಪಯೋಗಿಸಿದಾಗ್ಯೂ ವೃದ್ಧಿ ಹೊಂದುವದನ್ನೇ ಉಂಟು ಮಾಡಬೇಕೆಂದು ಕೇಳಿ ವರವಂ ಪಡೆದು ಮೂರನೇಭಾಗವನ್ನು ಪರಿಗ್ರಹಿಸಿತು. ಅದೇ ದೋಷವು ನಿಷಿದ್ಧವಾದ ಫೇನ (ನೊರೆ) ರೂಪದಿಂದ ನಿಂತುಕೊಂಡಿರುವುದು. ಸ್ತ್ರೀಯು ಪ್ರಸವಿಸುವವರಿವಿಗೂ ಗರ್ಭಕ್ಕೆ ಉಪಹತಿ-ಯುಂಟಾಗದಂತೆ ಪತಿಯು ಭೋಗವನ್ನುಂಟುಮಾಡುವ ಪಕ್ಷದಲ್ಲಿ ಈ ಬ್ರಹ್ಮಹತ್ಯಾಂಶವನ್ನು ಗ್ರಹಿಸುವೆನೆಂದು ಕೇಳಿಕೊಂಡುದಕ್ಕೆ ಹಾಗೇ ಆಗಲಿ ಎಂದು ವರವನ್ನು ತೆಗೆದುಕೊಂಡು ಪರಿಗ್ರಹಿಸಿದಳು. ಆಗ ಅದೇ ಮಾಸಿಕ ರಜಸ್ಸಾಗಿ ಕಾಣಿಸಿಕೊಂಡು ಆ ಕಾಲದಲ್ಲಿ ಅತಿ ಮಲಿನಿಯಾಗಿಯೂ, ಅಭ್ಯಂಜನವಿಲ್ಲದವಳಾಗಿಯೂ, ದರ್ಶನ ಸಂಭಾಷಣಾದಿಗಳಿಗನರ್ಹಳಾಗಿಯೂ ಎಲ್ಲಾ ಕರ್ಮಕ್ಕೂ ನಿಷೇಧಿಸಲ್ಪಟ್ಟವಳಾಗಿಯೂ, ರಾಜಸಾಹಾರವಂ ತಿನ್ನದ ಒಪ್ಪತ್ತು ಮಾತ್ರ ಸಾತ್ವಿಕಾಹಾರದಲ್ಲಿಯೇಇದ್ದುಕೊಂಡು, ನಖಾದಿಗಳನ್ನೂ ಕೂಡ ಕತ್ತರಿಸಿಕೊಳ್ಳದೆ, ಪೂರ್ವದಿಕ್ಕಿಗೆ ಶಿರಸ್ಸುಮಾಡಿ ಮಲಗುತ್ತ, ನಾಲ್ಕನೇದಿವಸ ಸ್ನಾನದಿಂದ ಪರಿಶುದ್ಧಳಾಗಿ, ಪತಿಯ ಸಂಗಮಕ್ಕೆ ಯೋಗ್ಯಳಾಗುವಳು. ಇದಕ್ಕೆ ಲೋಪ ಬರದೆ ಇರುವಲ್ಲಿ ಸಕಲ ಗುಣಭರಿತನಾದ ಪುತ್ರನೇ ಜನಿಸುವನು, ಇದಕ್ಕೆ ತಪ್ಪಿ ನಡೆದಲ್ಲಿ ದುಷ್ಟ-ಕುಂಟ-ಕುರುಡ-ಚೋರ ಮೊದಲಾದ ಮಕ್ಕಳು ಹುಟ್ಟುವರೆಂದು ಹೇಳಲ್ಪಟ್ಟಿದೆ.

(ಪ್ರ॥ ತೈತ್ತಿರೀಯ ಸಂಹಿತೆ ಕಾಂಡ ೨. ಪ್ರ. ೫.)

ವೇದೋಕ್ತವಾದ ಲಿಂಗಧಾರಣ ಲಿಂಗಪೂಜೆಯನ್ನು ಯಾವಜ್ಜೀವವೂ ಮಾಡಬೇಕಾದುದು ಪ್ರಬಲವಿಧಿಯಾದ್ದರಿಂದ ಶುಚ್ಯ ಶುಚಿಕಾಲಗಳಲ್ಲಿಯೂ ಕಟ್ಟಿದ ಲಿಂಗವನ್ನು ಪುನಃ ತೆಗೆದು ಮಡಗದೆ ಪ್ರತಿನಿತ್ಯದಲ್ಲಿಯೂ ಪೂಜೆಗೈಯ್ಯುತ್ತ ತತ್ಪ್ರಸಾದ ತೀರ್ಥವನ್ನು ತೆಗೆದುಕೊಳ್ಳುತ್ತಾ ಈ ಲಿಂಗಧಾರಣ ಲಿಂಗಪೂಜೆಯ ವಿಷಯದಲ್ಲಿ ಯಾವ ಆಶೌಚಗಳನ್ನೂ ಇಟ್ಟುಕೊಳ್ಳದೆ ಈ ಮಹಾವ್ರತವನ್ನು ನೆರವೇರಿಸುವದರಲ್ಲಿ ಆಶಕ್ತನಾಗಿರಬೇಕು. ಲಿಂಗಧಾರಣ ಲಿಂಗಪೂಜೆಗಳೆಂಬವು ಶ್ರುತಿ-ಸ್ಮೃತಿ ಪುರಾಣಗಳಿಂದ ಸ್ತ್ರೀ ಬಾಲಕರಾದಿಯಾಗಿ ಸರ್ವರಿಗೂ ಯಾವಜ್ಜೀವ ಕರ್ತವ್ಯವೆಂದು ಹೇಳಿದ ಮೇಲೆ ದರ್ಶನ ಸ್ಪರ್ಶನಾದಿಗಳಿಗೆ ಅಯೋಗ್ಯತೆಯನ್ನುಂಟುಮಾಡುವ ರಜಸ್ಸೂತಕಾದಿಗಳಿಂ ಕೂಡಿದ ಸ್ತ್ರೀಯರು ಲಿಂಗವನ್ನು ತೆಗೆಯದೆ ಪೂಜಿಸಿದಲ್ಲಿ ಅಶುಚಿ ಶರೀರ ಸಂಬಂಧದಿಂದ ಲಿಂಗದಲ್ಲಿರುವ ಕಳೇಯೇ ನಾಶವಾಗುವಲ್ಲಿ. ರಜಸ್ಸೂತಕ ಜನನಸೂತಕ ಯುಕ್ತರಾದ ಸ್ತ್ರೀಯರು ಲಿಂಗವನ್ನು ಕಟ್ಟಿಕೊಂಡು ಪೂಜಿಸುವದು ಹೇಗೆಂದು ಆಕ್ಷೇಪ ಬಂದಲ್ಲಿ ಕಬ್ಬಿಣವು ಅಗ್ನಿಸಂಬಂಧದಿಂದ ಅಗ್ನಿಯ ಸ್ವರೂಪವೇ ಆಗಿರುವಂತೆಯೂ, ಎಣ್ಣೆಯಿಂದ ಕೂಡಿರುವ ಬತ್ತಿಯು ಜ್ಯೋತಿಸ್ಸಂಬಂಧದಿಂದ ಕೇವಲ ಜ್ಯೋತಿಸ್ವರೂಪವೇ ಆಗಿರುವಂತೆಯೂ, ಪ್ರೀತಿಯುಕ್ತನಾದ ಸದ್ಭಕ್ತನು ಗುರುಕೃತ ಸಂಸ್ಕಾರಪೂರ್ವಕ ಕೊಡಲ್ಪಟ್ಟ ಲಿಂಗಸಂಬಂಧದಿಂದ ಕೇವಲ ಲಿಂಗಸ್ವರೂಪನೇ ಆಗುವದರಿಂದ ನಿತ್ಯಲಿಂಗಾರ್ಚನಾ ತತ್ಪರರಾದವರಿಗೂ, ಅಗ್ನಿಪರಿಗ್ರಹಮಾಡಿದವರಿಗೂ, ಯತಿಗಳಿಗೂ, ವಾನಪ್ರಸ್ಥರಿಗೂ ಸೂತಕಗಳಿಲ್ಲವೆಂದು ಪದ್ಮಪುರಾಣ ಪರಾಶರ ಸ್ಮೃತಿಗಳಲ್ಲಿ ಉಕ್ತವಾಗಿದೆ.

ರಜಸ್ವಲಾದ್ಯ ಶೌಚಗಳಿಂ ಕೂಡಿದ ಸ್ತ್ರೀಯು ಪಾಕಾದಿಕರ್ಮಗಳಂ ಮಾಡಿದಲ್ಲಿ ಅದರಿಂದುಟಾಗುವ ದುಷ್ಫಲವನ್ನು ವ್ಯಾಸೋಕ್ತ ಬಸವಪುರಾಣದಲ್ಲಿ ಸೂಚಿಸಿರುವರು. ಅದೆಂತೆಂದರೆ— [ಮಾದಲಾಂಬಿಕೆಯು ತನಗೆ ವಂಧ್ಯಾತ್ವ ವುಂಟಾಗಿರಲು, ನಿಮಿತ್ತವೇನು ? ಇದಕ್ಕೋಸ್ಕರ ಎಷ್ಟೋ ವ್ರತಗಳನ್ನಾಚರಿಸಿದರೂ ಎಷ್ಟೋ ದಾನಗಳಂ ಮಾಡಿದರೂ ಈ ವಧ್ಯಾಂತ್ವವು

ನಿವಾರಣೆಯಾಗಿ ಪುತ್ರನು ಉದ್ಭವಿಸಲಿಲ್ಲವು. ಇದಕ್ಕೆ ತಕ್ಕ ಪ್ರತಿಕಾರವನ್ನು ಹೇಳಬೇಕೆಂದು ಬಳಲಿ ಹಂಬಲಿಸಿ ನಾರದಋಷಿಯನ್ನು ಬೇಡಿಕೊಳ್ಳಲು ನಾರದನು. ದಿವ್ಯದೃಷ್ಟಿಯಿಂ! ಪರಿಶೀಲಿಸಿ, ಪುತ್ರೋದಯಕ್ಕುಂಟಾದ ವಿಘ್ನ ವನ್ನು ಕುರಿತು ಅಪ್ಪಣೆಕೊಡಿಸಿರುವುದೇನಂದರೆ— ಮಾದಲಾಂಬಿಕೆಯೇ! ಶಾಸ್ತ್ರೋಕ್ತವಾದ ಮಾತನ್ನು ಹೇಳುವೆನು ಲಾಲಿಸು, ಪೂರ್ವಜನ್ಮದಲ್ಲಿ ಯಾವ ಸ್ತ್ರೀಯು ರಜಸ್ಸಾಂಕರ್ಯದಲ್ಲಿರುವಳೋ ಅವಳು ಮುಂದಣ ಜನ್ಮ ದಲ್ಲಿ ವಂಧ್ಯೆಯೇ ಆಗುವಳು. ಮತ್ತು ದೇವಾರ್ಚನಾದಿಗಳಲ್ಲಿಯೂ ಪಿತೃ ಶ್ರಾದ್ಧಾದಿಗಳಲ್ಲಿಯೂ ಪಾಕಕಾರ್ಯವಿನಿಯುಕ್ತಳಾಗಿ ಮಧ್ಯ ರಜಸ್ವಲೆಯಾ ದರೂ ತತ್‌ಕ್ಷಣದಲ್ಲಿಯೇ ಆ ಪದಾರ್ಥಸ್ಪರ್ಶವಿಲ್ಲದೆ, ಹೊರಗೆ ಬರದೆ ಪಾಕವು ಕೆಟ್ಟುಹೋಗುವದೆಂಬ ಶಂಕೆಯಿಂದ ಯಾರಿಗೂ ಹೇಳದೆ ಆ ಕಾರ್ಯವಂ ಮುಗಿಸಿದ ಪಕ್ಷದಲ್ಲಿ ಆವಳು ನಿಶ್ಚಯವಾಗಿ ಬಂಜೆಯೇ ಆಗುವಳು. ಈ ವಚನದಿಂದ ಬಹಿಷ್ಠೆಯರಿಗೆ ಪಾಕಾದಿಕಾರ್ಯಕ್ಕೆ ನಿಷೇಧವು ಕಂಡುಬರುವುದು. ಮತ್ತು ಸ್ತ್ರೀಯರು ರಜಸ್ವಲೆಯರಾದ ಕಾಲದಲ್ಲಿ ಅವರ ನೆರಳು ಚಿಕ್ಕಮಕ್ಕಳಿಗೆ ಸೋಂಕಿದ ಮಾತ್ರದಿಂದಲೇ ಬಲವು ಕಡಿಮೆಯಾಗಿ ಒಣಗುತ್ತಿರುವಲ್ಲಿ, ಅದೇ ಹೆಂಗಸು ಮತ್ತೊಂದು ವೇಳೆ ರಜಸ್ವಲೆಯಾದ ಕಾಲದಲ್ಲಿ ನಾಲ್ಕನೇ ದಿವಸ ಸ್ನಾನಮಾಡಿಕೊಂಡು ಒಡ್ಡೆತಲೆಯಿಂದಲೇ ಒಂದು ವಿಧವಾದ ಮೂಲಿಕೆಯನ್ನು ಆ ಮಗುವಿನ ಶಿರಸ್ಸಿನಮೇಲೆ ಹಿಂಡಿದಲ್ಲಿ ಆ ರೋಗವು ನಿವೃತ್ತಿಯಾಗುವದೆಂದು ಲೋಕದಲ್ಲಿ ರಜೋವತಿಯರಾದ ಸ್ತ್ರೀಯರಿಗೆ ದೋಷವಂ ಹೇಳುವುದು ವಾಡಿಕೆಯಾಗಿದೆ. ಆದ ಕಾರಣ ಈ ಸೂತಕಗಳು ಅತೀವ ದೋಷಯುಕ್ತಗಳಾದ್ದರಿಂದ ಇತರ ಪಾಕಾದಿ ಕರ್ಮಗಳಿಗೆ ಹೋಗದೆ ಒಂದು ...ದ್ದಿಕೊಂಡು, ಆ ಭಾಗವನ್ನು ಸಿದ್ಧಾಂತಶಿಖಾಮಣಿಯಲ್ಲಿ ಹೇಳಿದ ರೀತಿಯಾಗಿ ಶಿವಪಾದೋದಕ ಸೇಚನೆ ಯಿಂದ ಶುದ್ಧಮಾಡಿಕೊಂಡು, ಧಾರಣ ಪೂಜಾನಿವೇದನಾದಿ ನಿತ್ಯವ್ರತವಂ ಪೂರ್ಣಗೊಳಿಸಿ, ಅದರಿಂದುಂಟಾಗುವ ಫಲವನ್ನು ಸ್ತ್ರೀಪುರುಷಸಾಮಾನ್ಯರೂ ಪಡೆಯಬೇಕಾಗಿರುವದು.

ಮತ್ತು ಸರ್ವಸಂಗಪರಿತ್ಯಾಗ ಮಾಡಿದವನಾಗಿಯೂ. ಸಕಲ ಕರ್ಮಧ್ವಂಸವುಳ್ಳವನಾಗಿಯೂ, ತಾನೇ ಸತಿ; ಲಿಂಗವೇ ಪತಿ ಎಂಬ ಸದ್ಭಾವವು ಕಾಯವಾಙ್ಮನಸ್ಸುಗಳಲ್ಲಿಯೂ ಸ್ಥಿರಗೊಂಡು ಬಾಹ್ಯಸತೀವರ್ಜಿತನಾಗಿ, ಲೋಕದ ಸತಿಪತಿಗಳು ಅನುಭವಿಸುವಂತೆ ಆನಂದವನ್ನು ತನ್ನಾತ್ಮದಲ್ಲಿ ನಿತ್ಯವಲ್ಲಿಯೂ ಅನುಭವಿಸುವವನಾಗಿಯೂ, ದ್ವಂದ್ವ ರಹಿತನಾಗಿಯೂ ನಿರ್ವಿಕೃತಿಯಾಗಿಯೂ, ನಿಷ್ಕ್ರಿಯನಾಗಿಯೂ, ಆತ್ಮೈಕಾ ರಾಮನಾಗಿಯೂ ಇರುವ ಶಿವಯೋಗಿಯು (ಜಂಗಮ) ಮಾತ್ರ ಲಿಂಗಧಾರಿಗಳೆಲ್ಲರಲ್ಲಿಯೂ ಭೇದ ರಹಿತನಾಗಿ ಪಕ್ವಾನ್ನಾದಿಗಳನ್ನೆಲ್ಲಾ ಸ್ವೀಕರಿಸಿ, ಶಿವಚಿಹ್ನೆಗಳೆನಿಸಿದ ಕಪಾಲಗಜಚರ್ಮಾದಿ ಪಂಚಸ್ಥಾನಗಳಲ್ಲಿ ಕಾಷಾಯ ಕಂಥಾ ಕಮಂಡಲು ಭಸ್ಮ ಘಟಿಕಾ ಯೋಗದಂಡರೂಪವಾದ ಪಂಚಮಹಾಮುದ್ರೆಗಳನ್ನು ಲೋಕೋಪಕಾರಕ್ಕೋಸ್ಕರ ಮಾತ್ರ ಧರಿಸಿ ಅತಿವರ್ಣಾಶ್ರಮಿಯೆಂಬುವ ಬಿರುದನ್ನು ಪಡೆದು, ಜಾತಿಸೂತಕರಹಿತನಾಗಿರುವನು. ಲೋಕದಲ್ಲಿ ಇದನ್ನನುಸರಿಸಿಯೇ ಲಿಂಗಕ್ಕೆ ಹೊಲೆಯಿಲ್ಲ, ಜಂಗಮಕ್ಕೆ ಕುಲವಿಲ್ಲ ಎಂಬ ಗಾದೆಯೂ ಹುಟ್ಟಿರುವುದು. ಗಾದೆಯು ವೇದಕ್ಕೆ ಸಮಾನವೆಂದು ವೃದ್ಧರು ಹೇಳಿರುವದರಿಂದ ಶಾಸ್ತ್ರದ ಮೂಲತತ್ವಗಳನ್ನೆಲ್ಲಾ ಚೆನ್ನಾಗಿ ತಿಳಿದು ಇದೊಂದು ಗಾದೆಯಲ್ಲಿಯೇ ನಿಖಿಲ ತತ್ವಗಳನ್ನೆಲ್ಲಾ ಅಡಗಿಸಿರುವರು. ಈ ಗಾದೆಯ ಅರ್ಥವನ್ನು ಎಷ್ಟು ವರುಷ ವಿಚಾರಮಾಡಿದಾಗ್ಯೂ ತೀರದಾಗಿದೆ. ಮುಖ್ಯವಾಗಿ ಪಂಚಸೂತಕಗಳು ವೀರಶೈವನಿಗೆ ಇಲ್ಲವೆಂಬ ವಚನದ ಅಭಿಪ್ರಾಯವೆಲ್ಲಾ ಈ ಗಾದೆಯಲ್ಲಿಯೇ ಲೀನವಾಗಿರುವದು.

ಈ ರೀತಿಯಾಗಿ ಪ್ರಾಣಲಿಂಗ ಸಂಬಂಧದಿಂದ ಉಂಟಾದ ಪಾರಮಾರ್ಥ್ಯ... ಪರ್ಯಾಪಂ ಪಡೆದು ತ್ಯಕ್ತಭಾರ್ಯಾಮಿತ್ರರುಳ್ಳವನಾದ ಜಂಗಮನೆಂಬುವನಿಗೆ ಮರಣವೆಂಬುವುದು ಸ್ವಾಧೀನವಾಗಿರುವುದರಿಂದ ದೇಹದಲ್ಲಿ ಜಿಗುಪ್ಸೆ ತೋರಿದ ಕಾಲದಲ್ಲಿ ಭಕ್ತಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣರೆಂಬ ಬಿರುದಾಂಕಿತರಾದವರು ಆತನ ಮುಂಭಾಗದಲ್ಲಿ ಉಘೆ ಎಂದು ಸಂತೋಷ ಸೂಚಕವಾದ ಜಯಘೋಷವನ್ನು ಮಾಡುತ್ತಿರಲು, ಆತನು ಆನಂದಯುಕ್ತ

ನಾಗಿ ಸಮಾಧಿಯಲ್ಲಿ ಕುಳಿತುಕೊಂಡು ಸ್ಥೂಲದೇಹವನ್ನು ಮರೆಮಾಡಿ ಕೊಳ್ಳುವನು. ಇಂತಪ್ಪ ಶಿವಯೋಗಿಗೆ ಆವಸೂತಕವೂ ಇಲ್ಲವು. ಹಿಂದೆ ಹೇಳಿದ ಐದುತರಗತಿಯವರು ಪ್ರತಿವರ್ಷವೂ ಆ ಶಿವಯೋಗಿಯನ್ನು ಉದ್ದೇಸಿಶಿ ಗಣಾರಾಧನೆ ಮಾಡುತ್ತ ಸಮಾಧಿ ಸ್ಥಾನದಲ್ಲಿ ಜ್ಞಾಪಕಾರ್ಥವಾಗಿ ಗದ್ದುಗೆಯನ್ನು ನಿರ್ಮಿಸಿದಲ್ಲಿ ಶಿವನು ಸಂತುಷ್ಟನಾಗಿ ಕಾಮಿತಾರ್ಥವನ್ನು ದಯಪಾಲಿಸುವನು. ಈ ರೀತಿ ಶಿವಯೋಗಿಯಾದ ಲಿಂಗಾವಧೂತನಿಗೆ ಅಪರಕರ್ಮಗಳಾವವೂ ಇಲ್ಲದೆ ಪ್ರತ್ಯಬ್ದದಲ್ಲಿಯೂ ಗಣಾರಾಧನೆಯನ್ನು ಮಾತ್ರ ಮಾಡತಕ್ಕದ್ದು.

ಪಂಚಸೂತಕಗಳು ಲಿಂಗಧಾರಣ ಲಿಂಗಪೂಜಾ ಲಿಂಗನಿವೇದನಾದಿ ಗಳಿಗೆ ಮಾತ್ರ ಯಾವ ಆಶೌಚಭಾವನೆಯಿಲ್ಲದೆ, ಇತರ ಕರ್ಮಗಳಲ್ಲಿ ಆಯಾಯ ಕಾಲಗಳಲ್ಲುಂಟಾದ ಆಶೌಚಗಳನ್ನು ನಿವೃತ್ತಿ ಮಾಡಿಕೊಂಡು ಶುದ್ಧಾತ್ಮರಾಗಬೇಕೆಂದು ಹೇಳಿ ಈ ಲೇಖವನ್ನು ಮುಗಿಸುವೆವು.

ಉಪನ್ಯಾಸ ಸಂಗ್ರಹ



೧೩

## ಹೆಣ್ಣು ಮಕ್ಕಳು ಕಟ್ಟಿದ ಹಾಡು

ಅವುಗಳಲ್ಲಿ ಅವರ ಜೀವನದ ಸುಖ ದುಃಖಗಳವರ್ಣನೆಯೇ ಹೆಚ್ಚಾಗಿರುವುದು ಆಶ್ಚರ್ಯವಲ್ಲ. ಹೆಣ್ಣು ಮಗಳೊಬ್ಬಳು ತಾಯಿಯನ್ನು ಅಗಲಿ ಹೋಗುವಾಗ ಹೇಳುವ ಮಾತಿದು;

ಹೆಣ್ಣು ಹಡೆಯಲಿ ಬ್ಯಾಡ ಹೆರವರಿಗೆ ಕೊಡಬ್ಯಾಡ
ಹೆಣ್ಣು ಹೋಗಾಗ ಅಳಬ್ಯಾಡ | ಹಡೆದವ್ವ
ಸಿಟ್ಟಾಗಿ ಶಿವಗೆ ಬೈಬ್ಯಾಡ ||

ತವರು ಮನೆಯನ್ನು ಸೇರಿ ಅಣ್ಣ ತಮ್ಮಂದಿರ, ಅತ್ತಿಗೆ ನಾದಿನಿಯರ, ಹಂಗಿನೊಳಗಾದಾಗ ಗಂಡನ ಮನೆಯೇ ಲೇಸೆನಿಸುತ್ತದೆ.

ಗಂಜೀಯ ಕುಡಿದರು ಗಂಡನ ಮನಿಲೇಸ
ಅಂದಣದ ಮ್ಯಾಲ ಚವುರವ | ಸಾರಿದರ
ಹಂಗೀನ ತವರ ಮನಿ ಸಾಕ ||

ತಾಯಿಲ್ಲದ ತವರಮನೆಯ ವರ್ಣನೆಯನ್ನು ಕೇಳಿ :

ತಾಯಿಲ್ದ ತವರೀಗೆ ಹೋಗದಿರು ನನ ಮನವ
ನೀರಿಲ್ದ ಕೆರಿಗೆ ಕಳ ಬಂದು | ತಿರುಗಾಗ
ಆಗ ನೋಡಡರ ದುಃಖಗಳ ||
ಹಡೆದಮ್ಮ ಇದ್ದವೆ ಮಡಲಿಗಕ್ಕಿಯ ಹುಯ್ದು

ಹರಿದಾರಿತನಕ ಕಳುಹೋಳು | ಅತ್ತೀಗೆ
ಬಾಗೀಲಬಿಟ್ಟು ಇಳಿಯಾಳು ||

ಮತ್ತೊಬ್ಬ ಹೆಣ್ಣುಮಗಳಿಗೆ ತವರುಮನೆಯ ಅಭಿಮಾನ ಅಧಿಕ;

ತವರೂರ ದಾರೀಲಿ ಕಲ್ಲಿಲ್ಲ ಮುಳ್ಳಿಲ್ಲ
ಸಾಸಿವೆಯಷ್ಟು ಮರಳಿಲ್ಲ | ಬಾನಲ್ಲಿ
ಬಿಸಿಲಿನ ಬೇಗೆ ಸುಡಲಿಲ್ಲ ||

ಈ ಪದ್ಯಗಳಿಗೆ ಯಾರ ವ್ಯಾಖ್ಯಾನವೂ ಅಗತ್ಯವಿಲ್ಲ. ಭಾಷೆ ಬಹಳ ಸುಲಭ. ಹೇಳುವ ವಿಷಯ ಜನಗಳ ನಿತ್ಯಜೀವನಕ್ಕೆ ಸಂಬಂಧಿಸಿದ್ದು. ಸಹಜವಾಗಿ ಬಂದ ಅಲಂಕಾರಗಳಿಗೆ ಕೊರತೆಯಿಲ್ಲ. ಆದರೆ ಇವುಗಳಲ್ಲಿ ಪಾಂಡಿತ್ಯವಿಲ್ಲ. ಇಲ್ಲದಿದ್ದರೆ ನಷ್ಟವೇನು ?

ಬಂಜೆಯ ಬಾಳನ್ನು ವರ್ಣಿಸುವ ಒಂದು ಪದ್ಯವನ್ನು ಹೇಳೋಣ;

ಬಾಲಕರಿಲ್ಲದ ಬಾಲೀದ್ಯಾತರ ಜನ್ಮ
ಬಾಡೀಗಿ ಎತ್ತು ದುಡಿದ್ಹಂಗ | ಬಾಳೆಲೆಯ
ಹಾಸ್ಯುಂಡು ಬೀಸಿ ಒಗೆದ್ಹಂಗ ||

ಅಳುವ ಮಗುವಿನ ವರ್ಣನೆಯೊಂದನ್ನು ಹೇಳಿ ಈ ವಿಮರ್ಶೆಯನ್ನು ಮುಗಿಸಬಹುದು.

ಅಳುವ ಕಂದನ ತುಟಿಯು ಹವಳದ ಕುಡಿಯ್ಹಂಗ
ಕುಡಿಹುಬ್ಬು ಬೇವಿನನೆಸಳ್ಹಂಗ | ಕಣ್ಣೋಟ
ಶಿವನ ಕೈಯಲಗು ಹೊಳೆದ್ಹಂಗ ||

(ಕನ್ನಡ ಸಾಹಿತ್ಯ)

೧೪

# ಗೃಹಸ್ಥಾಶ್ರಮ

ಭಾರತೀಯರಲ್ಲಿ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿಗಳೆಂದು ನಾಲ್ಕು ಆಶ್ರಮಗಳುಂಟು. ಈ ನಾಲ್ಕಾಶ್ರಮಗಳಲ್ಲಿ ಗೃಹಸ್ಥಾಶ್ರಮವೇ ಮಿಕ್ಕ ಆಶ್ರಮಗಳಿಗೆ ಆಧಾರವಾಗಿರುತ್ತದೆ ಈ ಗೃಹಸ್ಥಾಶ್ರಮಿಗಳ ಸಹಾಯವಿಲ್ಲದಿದ್ದರೆ ಬ್ರಹ್ಮಚಾರಿಗಳಾಗಲಿ, ವಾನಪ್ರಸ್ಥರಾಗಲಿ, ಸನ್ಯಾಸಿಗಳಾಗಲಿ, ಯಾರೂ ಜೀವಿಸಲು, ಸಾಧ್ಯವಿಲ್ಲ. "ಯಥಾನದೀನದಾಸರ್ವೇಸಾಗರೇಯಾಂತಿ ಸಂಸ್ಥಿತಿಂ। ತಥೈವಾಶ್ರಮಿಣಸ್ಸರ್ವೇ ಗೃಹಸ್ಥೇಯಾಂತಿ ಸಂಸ್ಥಿತಿಂ॥ ಗಂಗಾದಿ ನದಿಗಳು ವಕ್ರ-ವಕ್ರಗಳಾಗಿ ಹರಿದು ಹೋಗಿ ಕೊನೆಯಲ್ಲಿ ಸಮುದ್ರವನ್ನು ಹೇಗೆ ಆಶ್ರಯಿಸುತ್ತವೆಯೋ, ಹಾಗೆ ಬ್ರಹ್ಮಚಾರಿ, ವಾನಪ್ರಸ್ಥ, ಸನ್ಯಾಸಿಗಳೆಲ್ಲರೂ ಗ್ರಹಸ್ಥಾಶ್ರಮಿಗಳಿಂದಲೇ ತಮ್ಮ ಜೀವಿಕೆಯನ್ನು ನಡೆಯಿಸಬೇಕಾಗಿರುತ್ತದೆಂದು ಮನುಧರ್ಮ ಶಾಸ್ತ್ರವು ಗೃಹಸ್ಥಾಶ್ರಮವನ್ನು ವಿಶೇಷವಾಗಿ ಕೊಂಡಾಡಿರುವುದು. ಧರ್ಮ, ಅರ್ಥ, ಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳು ಗ್ರಹಸ್ಥಾಶ್ರಮಿಗಳಿಗೆ ಸುಲಭವಾಗಿ ದೊರೆಯುವವು. ಬ್ರಹ್ಮಚರ್ಯಾದ್ಯಾಶ್ರಮಿಗಳು ಶಾಸ್ತ್ರಮಾರ್ಗವನ್ನು ಅತಿಕ್ರಮಿಸದೆ ತಮ್ಮ ತಮ್ಮ ಉಪಾಸನಾಸಾಮರ್ಥ್ಯದಿಂದಲೇ ಮೋಕ್ಷರೂಪ. ಮಹಾಪುರುಷಾರ್ಥವನ್ನು ಪಡೆಯಬಹುದಾಗಿದೆ. ಗ್ರಹಸ್ಥಾಶ್ರಮಿಗಳಾದರೂ ತಾವು ತಮ್ಮ ಉಪಾಸನಾ ಮಾರ್ಗವನ್ನು ಸಾಮರ್ಥ್ಯವಿಲ್ಲದೆ ಅಲ್ಪ ಸ್ವಲ್ಪ ಬಿಟ್ಟರೂ ಉಳಿದ ಮೂರು ಆಶ್ರಮಿಗಳನ್ನು ಕಾಪಾಡುವದರಿಂದಲೂ, ಅವರ ಸೇವೆಯನ್ನು ಮಾಡುವುದರಿಂದಲೂ, ತಾವು ಕಷ್ಟ

ರ್ಜನೆಮಾಡಿ ಆ ಮೂರು ಆಶ್ರಮಧಾರಿಗಳಿಗೆ ಅನ್ನೋದಕಗಳನ್ನೂ ಬಟ್ಟೆ ಬರೆಗಳನ್ನೂ ಕೊಟ್ಟು ಕಾಪಾಡುವುದರಿಂದಲೂ, ಮನೆಗೆ ಅತಿಥಿಗಳಾಗಿ ಆಗಮಿಸಿದ ಶ್ರೀಗುರು ಜಂಗಮರನ್ನು ಪೂಜಿಸಿ ತುಷ್ಟಿಗೊಳಿಸುವುದರಿಂದಲೂ, ದೇವಸ್ಥಾನ ಮಠಾದಿಗಳನ್ನು ರಚಿಸಿ ಪುಣ್ಯಕರ್ಮಗಳನ್ನು ಮಾಡುವುದರಿಂದಲೂ, ಅನಾಥರಿಗೆ ವಿದ್ಯೆಕಲಿಯಲು ಸಹಾಯಮಾಡುವುದರಿಂದಲೂ, ಈಶ್ವರನ ಕೃಪೆಗೆ ಪಾತ್ರರಾಬಹುದಾಗಿದೆ. ಪ್ರಪಂಚದಲ್ಲಿ ಗ್ರಹಸ್ಥಾಶ್ರಮಿಗಳು ಈಶ್ವರನಿಂದ ನಿರ್ಮಿಸಲ್ಪಡದಿದ್ದರೆ ಮಿಕ್ಕಾಶ್ರಮ ಧರ್ಮಗಳು ಇಷ್ಟರೊಳಗಾಗಿ ನಾಮಾವಶೇಷಗಳಾಗುತ್ತಿದ್ದುವಲ್ಲದೆ, ಪಶುಪಕ್ಷಿ ಮೊದಲಾದ ಇತರ ಪ್ರಾಣಿಗಳು ಕೂಡ ಉಳಿಯುತ್ತಿದ್ದಿಲ್ಲ. ಬ್ರಹ್ಮಚಾರಿ ವಾನಪ್ರಸ್ಥ, ಸನ್ಯಾಸಿ ಮೊದಲಾದವರೆಲ್ಲರೂ, ಗೃಹಸ್ಥಾಶ್ರಮಿಗಳಿಂದಲೇ ಜನಿಸಿದ್ದಾರೆ. ಅವರುಗಳಿಂದಲೇ ಜೀವಿಸುತ್ತಿದ್ದಾರೆ. ಗ್ರಹಸ್ಥಾಶ್ರಮಿಗಳು ಮನೆಮಠಗಳನ್ನು ಕಟ್ಟಿಕೊಂಡು ಧನಾರ್ಜನೆಯಲ್ಲಿ ಆಸಕ್ತರಾಗಿರುತ್ತಾರೆ. ಅದರಂತೆ ಉಳಿದ ಮೂರು ಆಶ್ರಮದವರು ಹೊಲಮನೆಗಳಿಂದಾಗಲಿ ಅಥವಾ ಇನ್ನಾವರೀತಿಯಿಂದಾಗಲಿ ದ್ರವ್ಯಾರ್ಜನೆ ಮಾಡುವವರಲ್ಲ ! ಬ್ರಹ್ಮಚಾರಿಯು ಗುರುಕುಲವಾಸವನ್ನು ಮಾಡಿ ವಿದ್ಯಾಭ್ಯಾಸದಲ್ಲಿ ಆಶಕ್ತನಾಗಿರುತ್ತಾನೆ. ವಾನಪ್ರಸ್ಥನು ಕಾಡಿನಲ್ಲಿ ವಾಸಮಾಡಿರುತ್ತಾನೆ. ಸನ್ಯಾಸಿಯು ವೈರಾಗ್ಯವನ್ನವಲಂಬಿಸಿರುತ್ತಾನೆ. ಇವರುಗಳಿಗೆ ಯಾವ ವೃತ್ತಿಗಳೂ ಇಲ್ಲದಿರುವುದರಿಂದ ತಮ್ಮ ಜೀವಿಕೆಯನ್ನು ತಾವು ನಡೆಯಿಸಿಕೊಳ್ಳುವುದಾಗದೆ ಇವರೆಲ್ಲರೂ ಗೃಹಸ್ಥನು ಕೊಟ್ಟ ಅನ್ನೋದಕಗಳಿಂದಲೇ ಜೀವಿಸಬೇಕಾಗಿರುತ್ತದೆ ದಾನಧರ್ಮ ಪರೋಪಕಾರ ಮುಂತಾದ ಪರಲೋಕ ಸಾಧನಗಳಾದ ಪುಣ್ಯಕರ್ಮಗಳೆಲ್ಲವನ್ನೂ ಈ ಗ್ರಹಸ್ಥಾಶ್ರಮಿಯೇ ನಡೆಯಿಸಿಬೇಕಲ್ಲದೆ ಮಿಕ್ಕ ಆಶ್ರಮದವರೆಂದೂ ನಡೆಯಿಸಲಾರರು. ಇವರು ಗ್ರಹಸ್ಥಾಶ್ರಮದವರಂತೆ ಸತಿ-ಸುತಾದಿಗಳನ್ನು ಕಟ್ಟಿಕೊಂಡು ದ್ರವ್ಯಾರ್ಜನಾಸಕ್ತರಾಗಿಲ್ಲವು ಪ್ರಾಪಂಚಿಕ ವ್ಯವಹಾರದಿಂದ ಹಿಂದುರುಗಿ ವಿದ್ಯಾತಪೋನುಷ್ಠಾನಗಳೊಂದೇ ತಮ್ಮ ವಿಧಿಯನ್ನಾಗಿ ಮಾಡಿಕೊಂಡಿರುವ ಈ ಮೂರು ಆಶ್ರಮಿಗಳೂ ಈ ಪವಿತ್ರ ಗ್ರಹಸ್ಥಾಶ್ರಮಿಗಳಿಂದಲೇ ಜೀವಿಸಿಕೊಂಡಿರುವುದರಿಂದ, ಇವರು

ಆ ಗೃಹಸ್ಥರಿಗೆ ತಾವು ಆರ್ಜಿಸಿದ ತಪೋಭಾಗವನ್ನು ಕೊಟ್ಟು ಕರುಣಿಸಿಯೇ ಕರುಣಿಸುತ್ತಾರೆ. ಹೀಗೆ ಅನ್ಯೋಪಕಗಳನ್ನು ಕೊಟ್ಟು ಕಾಪಾಡುವುದರಿಂದ ಈ ಮೂರು ಆಶ್ರಮದವರೂ ಗೃಹಸ್ಥರಿಗೆ ಸಮಾಋಣಿಗಳೇ ಆಗಿದ್ದಾರೆಂದು ಹೇಳಬಹುದಾಗಿದೆ ಇಂಥ ಮೂರು ಆಶ್ರಮಗಳನ್ನು ಬದುಕಿಸಬೇಕಾದರೆ ಗೃಹಸ್ಥನು ಧರ್ಮಮಾರ್ಗವನ್ನು ಬಿಡದೆ ನಾನಾವೃತ್ತಿಗಳನ್ನು ಅವಲಂಬಿಸಿ ಧನಧಾನ್ಯ ಸಂಪನ್ನನಾಗಿರಲೇ ಬೇಕಾಗುವುದು. ಈ ಮೂರು ಆಶ್ರಮದವರಲ್ಲಿ ಯಾವುದೊಂದೂ ದವಸಧಾನ್ಯಗಳಿಲ್ಲದ್ದರಿಂದ ಪಶುಪಕ್ಷ್ಯಾದಿ ಪ್ರಾಣಿಗಳೂ ಸಹ ಇವರನ್ನು ಆಶ್ರಯಮಾಡದೆ ಗೃಹಸ್ಥನಿದ್ದೆಡೆಗೇ ಬಂದು ಜೀವಿಸಬೇಕಾಗುತ್ತದೆ. ಆಹಾರ ನಿದ್ರಾದಿಗಳಲ್ಲಿ ಮಾತ್ರ ಲೋಲಗಳಾದ ಈ ಮೂಕಪ್ರಾಣಿಗಳು ದವಸಧಾನ್ಯಗಳಿದ್ದಲ್ಲಿ ಹೋಗಿ ಹೊಟ್ಟೆ ತುಂಬಿಸಿಕೊಳ್ಳಬೇಕೆಂಬ ಇಚ್ಛೆಯುಳ್ಳವುಗಳಾಗಿವೆಯೇ ಹೊರತು, ತಾವು ದುಡಿದು ಪುಣ್ಯ-ಕರ್ಮಗಳನ್ನಾಚರಿಸಬೇಕೆಂಬ ಇಚ್ಛೆಯುಳ್ಳವುಗಳಾಗಿರುವುದಿಲ್ಲ. ಇಂಥ ಇಚ್ಛೆಯು ಇವುಗಳಿಗೆ ಎಂದೂ ಹುಟ್ಟುವ ಸಂಭವವಿಲ್ಲ. ಇಂತಹ ಮೂಕ ಪ್ರಾಣಿಗಳು ಕೂಡ ಆ ಗೃಹಸ್ಥನ ಆಶ್ರಯದಿಂದಲೇ ಜೀವಿಸಬೇಕಾಗಿದೆ. ಲೋಕಪಾಲಕನಾದ ಮಹಾರಾಜನೂ ಗೃಹಸ್ಥರಾದ ಪ್ರಜೆಗಳ ಕಂದಾಯದಿಂದಲೇ ಜಗತ್ತನ್ನು ಪಾಲಿಸಬೇಕಾಗಿದೆ. ಹೊಲಮನೆಗಳೊಂದೂ ಇಲ್ಲದ ಬ್ರಹ್ಮಚಾರಿಗಳಿಂದಾಗಲಿ, ವಾನಪ್ರಸ್ಥರಿಂದಾಗಲಿ, ಸನ್ಯಾಸಿಗಳಿಂದಾಗಲಿ ಮಹಾರಾಜನು ಕಂದಾಯ ಮೊದಲಾದವುಗಳನ್ನೇ ತೆಗೆದುಕೊಳ್ಳುವಂತಿಲ್ಲ ತಾವೇ ಗೃಹಸ್ಥಾಶ್ರಮಿಗಳ ಮನೆಗೆ ಹೋಗಿ ಭಿಕ್ಷೆಯಿಂದ ಜೀವಿಸುವಲ್ಲಿ ಇನ್ನೊಬ್ಬರಿಗೆ ಕರವನ್ನು ಕೊಡುವದೆಂತು ? ಇದರಿಂದ ರಾಜ್ಯಭಾರದ ವ್ಯವಸ್ಥೆಯು ಸಹ ಗೃಹಸ್ಥಾಶ್ರಮಿಗಳ ಮೇಲೆಯೇ ಬಿದ್ದಂತಾಯಿತು, ಚರಚರಾತ್ಮಕವಾದೀ ಜಗತ್ತು ಗೃಹಸ್ಥಾಶ್ರಮದ ಸಹಾಯವೆಂಬ ಒಂದು ಕಂಬದ ಆಧಾರದಲ್ಲಿ ನಿಂತಿರುತ್ತದೆ. ಆದುದರಿಂದ ಮಹಾಭಾರತಕಾರರು ಇದರ ರಹಸ್ಯವನ್ನೆಲ್ಲಾ ಯೋಚಿಸಿ "ಯಥಾ ಮಾತರ ಮಾಶ್ರಿತ್ಯ ಸರ್ವೇ ಜೀವಂತಿ ಜಂತವಃ | ಏವಂ ಗಾರ್ಹಸ್ಥ್ಯ ಮಾಶ್ರಿತ್ಯ ವರ್ತಂತ ಇತರಾಶ್ರಮಾಃ ||"

ಪ್ರಪಂಚದ ಸಮಸ್ತ ಪ್ರಾಣಿವರ್ಗವೂ ತಮ್ಮ ತಮ್ಮ ತಾಯಿಯ ಆಶ್ರಯ ದಲ್ಲಿ ಹೇಗೆ ಜೀವಿಸುತ್ತದೆಯೋ ಹಾಗೆ ಬ್ರಹ್ಮಚಾರಿಗಳೂ, ವಾನಪ್ರಸ್ಥರೂ, ಸನ್ಯಾಸಿಗಳೂ ಈ ಗ್ರಹಸ್ಥಾಶ್ರಮದವರನ್ನಾಶ್ರಯಿಸಿಯೇ ಜೀವಿಸುತ್ತಾರೆ; ಎಂದು ಗ್ರಹಸ್ಥಾಶ್ರಮಿಗಳನ್ನು ತಾಯಿಗೆ ಹೋಲಿಸಿರುತ್ತಾರೆ. ಗ್ರಹಸ್ಥಾಶ್ರ ಮಿಯು ಯೋಗವಿದ್ಯೆಯಿಲ್ಲದೆ, ಆತ್ಮವಿಚಾರವಿಲ್ಲದೆ, ಪ್ರಾಣಿರಕ್ಷಣೆಯೊಂದ ರಿಂದಲೂ, ಇತರಾಶ್ರಮಿಗಳ ಪೋಷಣೆಯಿಂದಲೂ, ಧನ್ಯಜೀವಿಯಾಗಿ ಪರ ಮಾತ್ಮನ ಸಂಪೂರ್ಣಾನುಗ್ರಹಕ್ಕೆ ಪಾತ್ರನಾಗುವನು ಆದುದರಿಂದ ಪೂಜ್ಯಳಾದ ತಾಯಿಯಂತೆ ಗ್ರಹಸ್ಥಾಶ್ರಮವನ್ನು ಹೊಂದಿದ ಮಾನವನು ಏಕಪತ್ನೀ ವ್ರತಸ್ಥನಾಗಿಯೂ, ಜಿತೇಂದ್ರಿಯನಾಗಿಯೂ, ಪಾಪಭೀರುವಾಗಿಯೂ, ಗುರುಹಿರಿಯರಲ್ಲಿ ಭಕ್ತಿಯುಳ್ಳವನಾಗಿಯೂ ಧರ್ಮಪೂರ್ವಕ ದ್ರವ್ಯಾರ್ಜ ನೆಯುಳ್ಳವನಾಗಿಯೂ, ಸದಾಚಾರಸಂಪನ್ನನಾಗಿಯೂ ಇರಬೇಕು. ಸಕ ಲಾಶ್ರಮದವರನ್ನು ಪೋಷಿಸುವ ಮಹಾಭಾರವು ಈ ಗ್ರಹಸ್ಥನ ಮೇಲೆ ಬಿದ್ದಿರುವುದರಿಂದ ಈ ಗೃಹಸ್ಥನು ಧರ್ಮಮಾರ್ಗದಿಂದ ಚ್ಯುತನಾಗಿ ಅಧರ್ಮ ಮಾರ್ಗದಲ್ಲಿ ಎಂದು ಕಾಲಿಡುವನೋ ಅಂದೇ ಇವನ ಅನ್ನೋದಕ ಪ್ರಭಾ ವದಿಂದ 'ಯಜಮಾನ ಕೃತಂ ಪಾಪಂ ಅನ್ನಮಾಶ್ರಿತ್ಯ ತಿಷ್ಠತಿ' ಎಂಬಂತೆ ಉಳಿದ ಬ್ರಹ್ಮಚರ್ಯಾದ್ಯಾಶ್ರಮಿಗಳ ಆತ್ಮವು ಸಹ ಕಲುಷಿತವಾಗಿ ಹೋಗು ವದು. ಗೃಹಸ್ಥರು ಮಾಡಿದ ಅಧರ್ಮದ ಫಲವು ಉಳಿದ ಆಶ್ರಮಿಗಳ ಹೃದ ಯದಲ್ಲೂ ಪರಿಣಾಮವಾಗುವುದೆಂಬುದೇ ಶಾಸ್ತ್ರದ ರಹಸ್ಯವು, ಇಂತಹ ಗೃಹ ಸ್ಥಾಶ್ರಮದಲ್ಲಿರುವ ಸ್ತ್ರೀ-ಪುರುಷರ ಪವಿತ್ರಹೃದಯದಲ್ಲಿ ಪರಮೇಶ್ವರನು ಸದಾ ಸನ್ನಿಹಿತನಾಗಿ ಯೋಗ ಕ್ಷೇಮಗಳ ಭಾರವನ್ನು ವಹಿಸಿರುತ್ತಾನೆ. ಈಗಣ ವಾತಾವರಣದಲ್ಲಿ ಸರ್ವಾಶ್ರಮಿಗಳೂ ಮೂಲಸ್ತಂಭರೂಪವಾದ ಗ್ರಹಸ್ಥಾಶ್ರಮಧರ್ಮವು ಶೈಥಿಲ್ಯವನ್ನೇ ಹೊಂದುತ್ತಲಿರುವದು. ಶೋಚ ನೀಯವಾಗಿದೆ. ಪರಮೇಶ್ವರನು ಈ ಧರ್ಮಕ್ಕೆ ಜಯವನ್ನೀಯಲಿ.

(ಪಂಚಾಚಾರ್ಯ ಪ್ರಭಾ)

# ಇಂದಿನವರ ಛಲ

೨

## ಪುರುಷರ ಛಲ

ಚುಟ್ಟ ಸಿಗರೇಟುಗಳ ಸೇದಬೇಕೆಂಬ ಛಲ
ಚಹಾ-ಕಾಫಿಗಳ ನಿತ್ಯ ಕುಡಿಯಬೇಕೆಂಬ ಛಲ
ಇಸ್ಪೇಟನಾಟವನು ಬಿಡಬಾರದೆಂಬ ಛಲ
ನಾಚು ಸಿನಿಮಾಗಳಿಗೆ ಹೋಗಬೇಕೆಂಬ ಛಲ
ಪರಧನವನಪಹರಿಸಿಕೊಳ್ಳಬೇಕೆಂಬ ಛಲ
ಪರವಧುವ ಮನವೊಲಿಸಿ ಕೂಡಬೇಕೆಂಬ ಛಲ
ಪರರಮನೆಯನು ಹಾಳುಮಾಡಬೇಕೆಂಬ ಛಲ
ಪರರನ್ನವನು ತಿಂದು ತೇಗ ಬೇಕೆಂಬ ಛಲ
ತಂದೆ-ತಾಯ್ಗಳ ಮಾತ ಕೇಳ್ಬಾರದೆಂಬ ಛಲ
ಗುರು ಹಿರಿಯ-ಸಜ್ಜನರ ಧಿಃಕ್ಕರಿಸಿ ನಡೆವ ಛಲ

## ಹೆಣ್ಣುಮಕ್ಕಳ ಛಲ

ಆಕೆಗಿಂ ಮಿಗಿಲಾದ ಸೀರೆಯುಡುವೆಂಬ ಛಲ
ಪತಿಯೊಡನೆ ಜಗಳಾಡಿಯಾಭರಣ ಪಡೆವ ಛಲ
ಅತ್ತೆಮಾತನು ಮೀರಿ ನಡೆಯಬೇಕೆಂಬ ಛಲ
ಸೊಸೆಯು ಮಾತನು ನಡೆಯಗೊಡಬಾರದೆಂಬ ಛಲ
ಗಂಡನನು ಕೈಯಾಳ ಮಾಡಿಕೊಂಬಂಥ ಛಲ

ಗಂಡುಬೀರಿಯರಾಗಿ ಮೆರೆಯಬೇಕೆಂಬ ಛಲ
ಗಂಡಬರುವಾಮೊದಲೆ ಉಂಣಬೇಕೆಂಬ ಛಲ
ಮಾತುಮಾತಿಗೆ ಚಂಡಿತನ ಮಾಡುವಂತ ಛಲ
ಜಗಳಾಡಿ ತೌರ್ಮನೆಗೆ ಹೋಗಬೇಕೆಂಬ ಛಲ

## ಸನ್ಯಾಸಿಗಳ ಛಲ

ಕಪಟ ತಪವನು ಮಾಡಿ ಶಿಷ್ಯರನು ಗಳಿಪ ಛಲ
ಶಿಷ್ಯರಿಂ ಹಣವನ್ನು ಪಡೆಯಬೇಕೆಂಬ ಛಲ
ಕಾಮಣ್ಣನೊಲು ಮೆರೆದೆ ತೀರಬೇಕೆಂಬ ಛಲ
ಏನು ದುಡಿಯದೆ ಭಕ್ತರನ್ನವುಣುವಂಥ ಛಲ
ಆರಿಗೂ ತಿಳಿಯದೊಲು ದುರ್ನಡತೆ ನಡೆವ ಛಲ
ದೊಡ್ಡ ಮಠವನು ಬೇಗ ಪಡೆಯಬೇಕೆಂಬ ಛಲ
ಜಗದ್ಗುರುವಾಗಿಯಡ್ಡಪಲ್ಲಕ್ಕಿ ಮೆರೆವ ಛಲ
ಇಂತು ಮಾನವರೆಲ್ಲ ದುಷ್ಟಛಲಗಳ ಪಿಡಿದು
ಛಲರಹಿತ ನಿನ್ನಡಿಯ ಮರೆತಿಹರು ದೇವಾ !

(ಭಾರತೀಯ ಸಿದ್ಧಾಂತ)



೧೬

# ಮನುಷ್ಯನಿಗೆ ಸದ್ಗುಣಗಳೇ ಭೂಷಣವಲ್ಲದೆ, ವಸ್ತ್ರ ಒಡವೆಗಳು ಭೂಷಣವಲ್ಲ



ಲೋಕದಲ್ಲಿ ಪ್ರತಿಯೊಬ್ಬ ಸ್ತ್ರೀ-ಪುರುಷರಿಗೂ ಅಲಂಕಾರಕ್ಕಾಗಿ ಉಡ-ತೊಡಲಿಕ್ಕೆ ರೇಶ್ಮಿ-ಜರತಾರಿ ವಸ್ತ್ರಗಳೂ, ಬಂಗಾರ-ಬೆಳ್ಳಿ ಮುತ್ತು-ರತ್ನಾದಿಗಳಿಂದ ಕೂಡಿದ ವಸ್ತ್ರ ಒಡವೆಗಳೂ ಬೇಕೇಬೇಕು. ವೈರಾಗ್ಯ ಮೂರ್ತಿಗಳು ಮಾತ್ರ ಇವುಗಳನ್ನು ತ್ಯಾಗಮಾಡುವರಲ್ಲದೆ, ಭೋಗಿಗಳಿಗೆ ಬೇಕು. ದೇವರು ಶ್ರೀಮಂತಿಕೆಯನ್ನು ಕೊಟ್ಟ ಕಾಲಕ್ಕೆ ತಮ್ಮ ತಮ್ಮ ಶಕ್ತ್ಯನುಸಾರ ಉಡಲಿಕ್ಕೂ ತೊಡಲಿಕ್ಕೂ ದಾಗೀನುಗಳನ್ನೂ ಇಡಲಿಕ್ಕೂ ಅಡ್ಡಿಯಿಲ್ಲ. ಇದ್ದು ಇಡದೆ ತೊಡದೆ ಇದ್ದರೆ ಲೋಕದಲ್ಲಿ ಜನರು ಹಾಸ್ಯ ಮಾಡುವರಲ್ಲದೆ, ಕೃಪಣನೆಂಬ ಬಿರುದನ್ನು ಪಡೆಯಬೇಕಾಗುತ್ತದೆ. ಕಿಮ್ಮತ್ತಿನ ವಸ್ತ್ರಗಳನ್ನು ಉಡಲಿಕ್ಕೂ ಬೆಲೆಯುಳ್ಳ ಒಡವೆಗಳನ್ನು ಇಡಲಿಕ್ಕೂ ಬಡವರಿಗೆ ಸಾಧ್ಯವಿಲ್ಲವು. "ಹಾಸಿಗೆಯಿದ್ದಷ್ಟು ಕಾಲುಚಾಚಬೇಕು" ಎಂಬ ನಾಣ್ಣುಡಿಯಂತೆ ತಮ್ಮ ತಮ್ಮ ಶಕ್ತ್ಯನುಸಾರವಾಗಿ ವಸ್ತ್ರ-ವಡವೆಗಳನ್ನು ಉಪಯೋಗಿಸಬೇಕಲ್ಲದೆ, ತಮ್ಮ ಶಕ್ತಿಮೀರಿ ಎಂದೂ ಉಪಯೋಗಿಸಬಾರದು. ಈ ವಸ್ತ್ರ-ಒಡವೆಗಳ ಮೇಲಿನ ಪ್ರೇಮವು ಪುರುಷರಿಗಿಂತಲೂ ಸ್ತ್ರೀಯರಿಗೆ ಹೆಚ್ಚು ಇರುತ್ತದೆ. ಮತ್ತು ಅವರು ಇಡತಕ್ಕ ವಸ್ತುಗಳಾದರೂ ಬಹಳ. ಲಗ್ನ ಇಲ್ಲವೆ ಯಾವುದಾದರೊಂದು ಕಾರ್ಯಕ್ಕೆ ಬೇರೂರಿಗೆ ಹೋಗಬೇಕಾದರೆ, ಚಲೋ ವಸ್ತ್ರ-ಒಡವೆಗಳು ಅವಶ್ಯಬೇಕು. ಅಗ್ಗೆ ತಮ್ಮ

ಹತ್ತಿರ ಇದ್ದಷ್ಟು ತೆಗೆದುಕೊಂಡು ಹೋಗಬೇಕು. ಅಂಥಲ್ಲಿ ಕಳವು ಆಗಿ ಹೋಗುವದು ವಿಶೇಷ. ಹೋದರೂ ನಮ್ಮದೇ ಹೋಗುತ್ತದೆ. ಕೆಲವರು ಎರಡನೇಯವರ ವಸ್ತ್ರ-ಒಡವೆಗಳನ್ನು ತೆಗೆದುಕೊಂಡು ಹೋಗುವ ರೂಢಿಯನ್ನು ಇಟ್ಟುಕೊಂಡಿರುತ್ತಾರೆ; ಇದು ಬಹಳ ತಪ್ಪು. ಕಳೆದು ಹೋದರೆ ಮತ್ತೆ ಅವರಿಗೆ ಕೈಯಿಂದ ರೂಪಾಯಿಗಳನ್ನು ಕೊಡಬೇಕಾಗುತ್ತದೆ; ಇದೊಂದು ದೊಡ್ಡ ಹಾನಿಯು. ತಮ್ಮ ಹತ್ತಿರವಿದ್ದ ವಸ್ತ್ರ ನೂಲಿನವೇ ಆಗಲಿ ಸ್ವಚ್ಛವಾಗಿ ಇಟ್ಟುಕೊಂಡಿರಬೇಕು. ಮಲಿನವಾಗಿ ಮಾತ್ರ ಇರಬಾರದು. ಇದ್ದವರು ವಸ್ತ್ರ-ಒಡವೆಗಳನ್ನು ಇಟ್ಟದ್ದುನೋಡಿ ಬಡವರು ಅಸೂಯಪಡಬಾರದು. ಮತ್ತು ಅವರಂತೆ ಕೊಂಡುಕೊಳ್ಳ ಬೇಕೆಂದು ಮನೆಯಲ್ಲಿ ಹಿರಿಯರಿಗೆ ತ್ರಾಸುಕೊಡಬಾರದು. ನಮ್ಮ ಉತ್ಪನ್ನವೆಷ್ಟು? ದಿನಾಲು ನಮ್ಮ ಖರ್ಚು ಎಷ್ಟು ?ಸಂಸಾರವು ಹೇಗೆ ಸಾಗುತ್ತದೆ? ಇದನ್ನು ಪ್ರತಿಯೊಬ್ಬ ಸ್ತ್ರೀಪುರುಷರೂ ವಿಚಾರಿಸಬೇಕು. ಕೆಲವು ಅಜ್ಞರು ವಿಚಾರ ಮಾಡದೆ ಹಿರಿಯರಿಗೆ ತ್ರಾಸು ಕೊಡತ್ತಾರೆ. ಇವರ ತ್ರಾಸಿಗೆ ಬೇಸತ್ತು ಹಿರಿಯರು ಸಾಲವನ್ನು ಮಾಡಿ, ವಸ್ತ್ರ-ಒಡವೆಗಳನ್ನು ಮಾಡಿಸುತ್ತಾರೆ. ಸಾವುಕಾರರಿಗೆ ಪ್ರತಿ ವರ್ಷ ಬಡ್ಡಿಯನ್ನು ಕೊಡಬೇಕಾಗುತ್ತದೆ. ಹೀಗೆ ಮಾಡುವವರ ಪರಿಣಾಮ ಏನಾಗುತ್ತೆಂಬುದನ್ನು ದೃಷ್ಟಾಂತಪೂರ್ವಕ ತಿಳಿಸುತ್ತೇವೆ. ಒಬ್ಬ ಸ್ತ್ರೀಯಳು ತಮ್ಮ ಹಿರಿಯರಿಗೆ ಕಿವಿಯೊಳಗಿನ ಓಲೆಯನ್ನು ಮಾಡಿಸಿಕೊಡಿರೆಂದು ಉಪದ್ರವಕೊಟ್ಟಳು. ಮಾಡಿಸಲಿಕ್ಕೆ ಶಕ್ತಿಯಿದ್ದಿಲ್ಲ. ಉಪದ್ರವನ್ನು ತಡೆಯಲಾರದೆ ಸಾಲಮಾಡಿ ರೂಪಾಯಿತಂದು ಓಲೆಯನ್ನು ಮಾಡಿಸಿಕೊಟ್ಟನು. ಪ್ರತಿ ವರ್ಷ ಸಾವುಕಾರರಿಗೆ ಬಡ್ಡಿಯನ್ನು ಕೊಡುವುದು ನಡೆಯಿತು. ಒಂದೆರಡುವರ್ಷ ತಮ್ಮ ಪ್ರಪಂಚದ ಅಡಚಣಿಯಲ್ಲಿಯೇ ಬಡ್ಡಿ ಕೊಟ್ಟರು. ಮುಂದೆ ಮೂರನೇವರ್ಷ ಬಡ್ಡಿಕೊಡುವದು ಆಗಲಿಲ್ಲ. ಆಗ ಸಾವುಕಾರರ ತ್ರಾಸು ಬಹಳವಾಗಿ, ಆ ಓಲೆಯನ್ನು ಮಾರಿ ಬಡ್ಡಿ ಕೊಟ್ಟನಂತೆ. ಇಂಥ ಸ್ಥಿತಿಯನ್ನು ಎಂದೂ ತಂದುಕೊಳ್ಳಬಾರದು. ಸ್ತ್ರೀಯರಿಗೆ ಪಾದದಿಂದ ಶಿರದವರೆಗೂ, ವಸ್ತ್ರ-ಒಡವೆಗಳನ್ನಿಟ್ಟರೂ ಸಾಕಾಗುವದಿಲ್ಲ. ದಾಗೀನಗಳನ್ನಿಡುವ

ಪೇಂದ ದಾರಿಯಲ್ಲಿ ಕಳ್ಳರ ಭಯ, ಒನ್ಮೊವ್ಮೆ ಪ್ರಾಣವನ್ನಾದರೂ ಕಳೆದುಕೊಳ್ಳಬೇಕಾಗುವದು. ಇವುಗಳ ಜೋಪಾನಕ್ಕಾಗಿ ರಾತ್ರಿ ನಿದ್ರೆಯೂ ಸಹ ಪೂರ್ಣವಾಗಲಾರದು. ಇವಿಲ್ಲದಿದ್ದರೆ ಕಳ್ಳರ ಭಯವಿಲ್ಲ. ಜೀವದ ಅಂಜಿಕೆಯಿಲ್ಲ. ನಿದ್ರೆಗೆ ಆತಂಕವಿಲ್ಲ. ಈ ಒಸ್ತು-ಒಡುವೆಗಳು ಮರಣದ ಪರ್ಯಂತ ಇರುತ್ತವೆ. ಜೀವ ಹೋದಬಳಿಕ ಎಲ್ಲವನ್ನೂ ಕಸಿದುಕೊಳ್ಳುತ್ತಾರೆ ಮಣಿ ಹೇಮಾದಿಗಳ ಅಲಂಕಾರದಿಂದ ದುಷ್ಟರು ಮೋಹಿಸುತ್ತಾರಲ್ಲದೆ, ದೇವರಾಗಲಿ ಸತ್ಪುರುಷರಾಗಲಿ ಪ್ರೀತಿಸುವದಿಲ್ಲ. ಮನವು ಮಾತ್ರ ತೃಪ್ತಿ ಹೊಂದುವದಲ್ಲದೆ, ಇದರಿಂದ ಮುಕ್ತಿಯಾಗಲಿ, ಸುಖವಾಗಲಿ ದೊರೆಯಲಾರದು ಈ ವಸ್ತ್ರಾಭರಣಗಳೊಂದಿಗೆ ಯಾವ ಇಂದ್ರಿಯಗಳಿಗೆ ಯಾವ ಯಾವ ಸದ್ಗುಣಗಳಿರಬೇಕೋ, ಆ ಸದ್ಗುಣಗಳಿದ್ದರೆ ಆ ಸ್ತ್ರೀ-ಪುರುಷರು ಲೋಕದಲ್ಲಿ ಮಾನ್ಯರಾಗಿ ಶಿವ ಪ್ರೀತಿಗೆ ಪಾತ್ರರಾಗುವರು, ಅಂತಹ ಸದ್ಗುಣಗಳಿರದೆ ಕೇವಲ ಅಲಂಕಾರಗಳಿಂದ ಕೂಡಿದ್ದಾದರೆ ಇಹಲೋಕದಲ್ಲಿ ನಿಂದ್ಯರಾಗಿ ಪರಶಿವನ ಕೃಪೆಗೆ ದೂರರಾಗುವರು. ಇದೇ ವಿಷಯವನ್ನು ಕುರಿತು ಶ್ರೀ ಸರ್ಪಭೂಷಣ ಶಿವಯೋಗಿಗಳು ತಮ್ಮ ಕೈವಲ್ಯದಲ್ಲಿ ಕೆಲವು ಪದ್ಯಗಳನ್ನು ಹೇಳಿದ್ದಾರೆ ವಾಚಕರ ಅವಗಾಹನೆಗಾಗಿ ಕೆಳಗೆ ಕೊಡುತ್ತೇವೆ.

ಗುಣಗಳೇ ಭೂಷಣವಲ್ಲದೆ ಸರ್ಪಕ್ಕು |
ಮಣಿ ಹೇಮಾದಿಗಳು ಭೂಷಣವಲ್ಲವು !
ಮಣಿ ಹೇಮಭೂಷವಾದೇಹಾಂತ ವಿರವಂತಿ |
ಗುಣ ಭೂಷವಾಚಂತ್ರಾರ್ಕವದಾಗಿಯೆ ॥ ಪಲ್ಲ ॥

ಗುಣಗಳೇ ಅಲಂಕಾರಗಳಲ್ಲದೆ ರತ್ನ ಭಂಗಾರಗಳಲ್ಲ ಅವು ತಮ್ಮ ದೇಹವಿರುವವರೆಗೂ ಇರುತ್ತವೆ. ಗುಣಗಳಾದರೂ ಸೂರ್ಯ-ಚಂದ್ರರು ಇರುವವರೆಗೂ (ಅಂದರೆ ಶಾಶ್ವತವಾಗಿ) ಇರುವವು.

ಚರಣಗಳಿಗೆ ತೀರ್ಥಯಾತ್ರೆಯೇ ಭೂಷಣ |
ಕರಕೆ ಸತ್ಪಾತ್ರ ದಾನವೆ ಭೂಷಣ |

ಗುರುಪಾದ ಪ್ರಣತಿಯೆ ಶಿರಸಿಗೆ ಭೂಷಣ ।
ಹರದರುಶನವೆ ನೇತ್ರಕೆ ಭೂಷಣ ॥೧॥

ಕಾಲುಗಳಿಗೆ ತೀರ್ಥಯಾತ್ರೆಗಳಿಗೆ ಹೋಗುವದೇ ಅಲಂಕಾರ. ಕೈಗಳಿಗೆ ಯೋಗ್ಯರಾದವರಿಗೆ ದಾನ ಮಾಡುವದೇ ಅಲಂಕಾರ. ತಲೆಗೆ ಗುರುಗಳ ಪಾದಕ್ಕೆ ನಮಸ್ಕಾರ ಮಾಡುವದೇ ಅಲಂಕಾರ ಕಣ್ಣುಗಳಿಗೆ ಈಶ್ವರನ ಮೂರ್ತಿಯನ್ನು ನೋಡುವುದೇ ಅಲಂಕಾರ.

ಅನುಪಮ ಸತ್ಯವೆ ರಸನೆಗೆ ಭೂಷಣ ।
ಘನ ಪುಣ್ಯ ಕಥೆಯೆ ಕರ್ಣಕೆ ಭೂಷಣ ।
ತನುವಿಗೆ ಪರಕಾಂತಾಜ ಹೆನವೆ ಭೂಷಣ ।
ಮನಸಿಗೆ ಧರ್ಮ ಚಿಂತೆಯೇ ಭೂಷಣ ॥೧॥

ನಾಲಿಗೆಗೆ ಸತ್ಯವನ್ನು ಹೇಳುವದೇ ಅಲಂಕಾರ ಕಿವಿಗೆ ಶ್ರೇಷ್ಠರಾದವರ ಪುಣ್ಯ ಕಥೆಯೇ ಅಲಂಕಾರ ಶರೀರಕ್ಕೆ ಪರಸ್ತ್ರೀಯರ ಅಪೇಕ್ಷೆಯನ್ನು ಬಿಡುವುದೇ ಅಲಂಕಾರ. ಮನಸ್ಸಿಗೆ ಧರ್ಮವಿಚಾರವನ್ನು ಮಾಡುವುದೇ ಅಲಂಕಾರ.

ಪರಿಪೂರ್ಣ ವಿದ್ಯೆಗೆ ನಿಗರ್ವವೆ ಭೂಷಣ ।
ಸಿರಿಗೆ ದೀನರ ಪೋಷಣೆಯೆ ಭೂಷಣ ।
ನರ ಜನ್ಮಕೆ ಹಿತಾಹಿತಾಪ್ತೆಯೇ ಭೂಷಣ ।
ದುರಿತ ಭೀತಿಯೆ ಸೌಜನ್ಯಕೆ ಭೂಷಣ ॥೩॥

ಪೂರ್ಣವಾದ ವಿದ್ಯೆಯಿರುವುದಕ್ಕೆ ಗರ್ವವಿಲ್ಲದಿರುವುದೇ ಭೂಷಣ ಐಶ್ವರ್ಯವಿರುವುದಕ್ಕೆ ಬಡವರನ್ನು ರಕ್ಷಿಸುವದೇ ಭೂಷಣ. ಮನುಷ್ಯ ಜನ್ಮವೆತ್ತಿರುವುದಕ್ಕೆ ಹಿತಾಹಿತಗಳ ತಿಳವಳಿಕೆಯೇ ಭೂಷಣ. ಒಳ್ಳೆಯತನಕ್ಕೆ ಪಾಪದ ಭೀತಿಯೇ ಭೂಷಣ.

ಧರೆಯೊಳಹಿಂಸೆಯೆ ಕರುಣಕ್ಕೆ ಭೂಷಣ।
ಪರತರತಪಕೆ ಶಾಂತಿಯೆ ಭೂಷಣ।
ದರುಶನಾಶ್ರಮಕೆಲ್ಲ ವಿರತಿಯೆ ಭೂಷಣ।
ವಿರತಿಗೆ ಬ್ರಹ್ಮವಿದ್ಯೆಯೆ ಭೂಷಣ ॥೪॥

ದಯೆಯಿದ್ದುದಕ್ಕೆ ಇತರರಿಗೆ ಹಿಂಸೆ ಮಾಡದಿರುವದೇ ಅಲಂಕಾರ ಶ್ರೇಷ್ಠವಾದ ತಪಸ್ಸಿಗೆ ಶಾಂತಿ ಇರುವದೇ ಅಲಂಕಾರ. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸಗಳೆಂಬ ಆಶ್ರಮಗಳಿಗೆ ವೈರಾಗ್ಯವೇ ಅಲಂಕಾರ ವೈರಾಗ್ಯಕ್ಕೆ ಬ್ರಹ್ಮ ವಿದ್ಯೆಯೇ ಅಲಂಕಾರ.

ನೆರೆಪೂರ್ಣತ್ವವೇ ಯೋಗಕ್ಕೆ ಭೂಷಣ।
ಪರಿವಿಗೆ ನಿರ್ವಿಕಲ್ಪವೆ ಭೂಷಣ।
ಗುರುಸಿದ್ಧನಮಲಕೃಪಾಲಬ್ಧಿಗೆ ಮುಕ್ತಿಯೆ।
ಪರಿಕಿಸಲಂತಿವೆಲ್ಲಕು ಭೂಷಣ ॥೫॥

ಯೋಗಾಭ್ಯಾಸ ಮಾಡಿದ್ದಕ್ಕೆ ಚಿತ್ತವೃತ್ತಿಗಳನ್ನು ಸ್ವರೂಪದಲ್ಲಿ ನಿರೋಧ ಮಾಡುವದೇ ಅಲಂಕಾರ ಜ್ಞಾನವಿರುವದಕ್ಕೆ ವಿಕಲ್ಪವಿಲ್ಲದ ತಿಳಿವಳಿಕೆಯೇ ಅಲಂಕಾರ. ಶ್ರೀ ಗುರುಸಿದ್ಧಸ್ವಾಮಿಯ ಕರುಣದಿಂದ ಉಂಟಾದ ಮೋಕ್ಷವೇ ಈ ಮೇಲೆ ಹೇಳಿದ ಎಲ್ಲಾ ಗುಣಗಳಿಗೂ ಅಲಂಕಾರ.

ಈ ಪ್ರಕಾರವಾಗಿ ಆಭರಣಗಳಿಗಿಂತಲೂ ಗುಣವೇ ಭೂಷಣವೆಂದು ಎಲ್ಲರಿಗೂ ಸ್ವಚ್ಛವಾಗಿ ಕಂಡುಬರುತ್ತದೆ.

ಇನ್ನು ಆಭರಣಗಳಿಡಬಾರದೆಂಬ ಬಗ್ಗೆ—

ಬೇಡವ್ವಾ ನಮಗಿಂಥ ಒಡವೆ ವೈಯ್ಯಾರ।
ಪೊಡವಿಪತಿಯು ಇತ್ತ ಸಾಕು ಶೃಂಗಾರ ॥ಪ॥
ಮುತ್ತು ಮಾಡಿತು ಮೂಗು ಕಿವಿಗಳ ತೂತು।

ನೆತ್ತಿ ಮೇಲಣ ಕೇಶ ಹೋದಾವುಕಿತ್ತು ।
ಪತ್ತಾರ ಕೆಡಿಸುವನು ಭಂಗಾರ ಬೆಸ್ತು ।
ವಸ್ತುಗಳಿಟ್ಟನಾಹೋದೆ ಬೇಸತ್ತು ॥೧॥
ಒಡವೆಯು ಹುಡುಗರ ಜೀವಕ್ಕೆ ಮುಳುವು ।
ಸಡಗರದಿಂದ್ಹೊರಗ್ಹೋಗುವದು ಕಳವು ।
ಅಡವಿಯೊಳು ಸಿಕ್ಕರೆ ತುಡುಗರ ಭಯವು ।
ತೊಡವುಗಳಿಟ್ಟರೆ ನಡುಸೀರೆ ಶೆಳೆವ ॥೨॥
ಗುಣಗಳೆ ಭೂಷಣ ಎಲ್ಲಕ್ಕೂ ಹೆಚ್ಚವ್ವಾ ।
ಮಣಿಹೇಮದೊಡವೆಗಳೆನಗೆ ತುಚ್ಛವ್ವಾ ।
ಪ್ರಾಣಪತಿಯ ಸೇವೆ ಮಾಡಬೇಕವ್ವಾ ।
ಕ್ಷೋಣಿಯೋಳ್ ಹೆಂಗಳ್ಗೆ ಪತಿದೈವವವ್ವಾ ॥೩॥

ಆದ್ದರಿಂದ ಪ್ರತಿಯೊಬ್ಬ ಸ್ತ್ರೀ-ಪುರುಷರು ಕ್ಷಣಿಕವಾದ ಮಣಿ ಹೇಮಾದಿಗಳ ಅಲಂಕಾರಕ್ಕಾಗಿ ಮೋಹಿಸದೆ, ನಿತ್ಯಸುಖವನ್ನು ಕೊಡತಕ್ಕ ಸದ್ಗುಣಗಳಿಂದ ಭೂಷಿತರಾಗಬೇಕೆಂದು ಇಚ್ಛಿಸುತ್ತೇವೆ.



೧೭

# ಮಣ್ಣಿನ ಪಾತ್ರೆಗಳ ಉಪಯೋಗ ವಿಚಾರ



ಸದ್ಯಃ ಜಗತ್ತಿನಲ್ಲಿ ಪ್ರತಿಯೊಬ್ಬರ ಮನೆಯಲ್ಲಿಯೂ ಮೆರೆಯುತ್ತಿರುವ ಕಪ್ಪುಬಸಿಗಳನ್ನು ಕೆಲವರು ಗಾಜಿನವೆಂದು ತಿಳಿದು ಉಪಯೋಗಿಸುತ್ತಾರೆ. ಆದರೆ ಅವು ಗಾಜಿನವಲ್ಲವು. ಅವು ಆಯಾ ದೇಶದ ಮಣ್ಣಿನಿಂದ ತಯಾರಿಸಿ ಉತ್ತಮ ಪಾಲಿಸ್ ಮಾಡಿ ನಾನಾತರದ ಬಣ್ಣಗಳಿಂದಲೂ, ನಾನಾತರದ ಸುಳುವಿನಿಂದಲೂ ಕಂಗೊಳಿಸುವಂತೆ ತಯಾರ ಮಾಡಿರುತ್ತಾರೆ. ತಾಮ್ರ, ಹಿತ್ತಾಳೆ ಮೊದಲಾದ ಪಾತ್ರೆಗಳನ್ನು ಬಿಟ್ಟು ಮಣ್ಣಿನ ಪಾತ್ರೆಗಳನ್ನು ಉಪಯೋಗ ಮಾಡುವುದಕ್ಕೆ ಅವು ಅಗ್ಗವಾಗಿ ದೊರೆಯುವುದೆ ಕಾರಣ ! ಸುಡುವ ಚಹಾ-ಕಾಫಿಯನ್ನು ಧಾತುಮಯ ಪಾತ್ರೆಗಳಲ್ಲಿ ಹಾಕಿದರೆ ಬೇಗ ಕಾದು ಹಿಡಿಯಲಿಕ್ಕೆ ಬಾರದಂತೆ ಆಗುತ್ತದೆ. ಮಣ್ಣಿನ ಪಾತ್ರೆಗಳಲ್ಲಿ ಹಾಗೆ ಕಾಯುವುದಿಲ್ಲ. ಆದ್ದರಿಂದ ಜನರು ಕಪ್ಪು ಬಸಿಗಳನ್ನು ಉಪಯೋಗಿಸುತ್ತಾರೆ. ನಮ್ಮ ದೇಶದಲ್ಲಿಯಾದರೂ ಅಡಿಗೆ ಮಾಡುವುದಕ್ಕಾಗಲಿ, ನೀರು ತುಂಬುವದಕ್ಕಾಗಲಿ, ನೀರು ತರುವುದಕ್ಕಾಗಲಿ ಮಣ್ಣಿನ ಪಾತ್ರೆಗಳನ್ನೇ ಉಪಯೋಗಿಸುತ್ತಾರೆ. ಒಂದೊಂದು ಕಾರಣದಿಂದ ಈ ಪಾತ್ರೆಗಳೇ ನೆಟ್ಟಗೆನಿಸುತ್ತವೆ. ಇದರಲ್ಲಿ ಅಡಿಗೆಯನ್ನು ಮಾಡುವುದರಿಂದ ಕಿಲುಬುವದಿಲ್ಲ. ಬೇಸಿಗೆಯ ಕಾಲದಲ್ಲಿ ಇದರಲ್ಲಿ ನೀರು ಹಾಕುವುದರಿಂದ ತಣ್ಣಗಿರುತ್ತವೆ ಮುಖ್ಯವಾಗಿ ಲಕ್ಷ್ಯದಲ್ಲಿಡತಕ್ಕದ್ದೇನಂದರೆ ಅವು ಅಶುದ್ಧವಾಗದಂತೆ ಎಚ್ಚರಿಕೆಯಿಂದ ಉಪಯೋಗಿಸಬೇಕು. ಆಚಾರ ದೃಷ್ಟಿಯಿಂದ ವಿಚಾರ ಮಾಡಿದರೆ

ಮಣ್ಣಿನ ಪಾತ್ರೆಗಳ ಉಪಯೋಗಕ್ಕಿಂತಲೂ ಹಿತ್ತಾಳೆ ಮೊದಲಾದ ಪಾತ್ರೆಗಳೇ ಉಪಯೋಗಕ್ಕೆ ಶ್ರೇಷ್ಠವೆಂದು ಕೆಳಗಿನ ಆಧಾರದಿಂದ ಗೊತ್ತಾಗುತ್ತದೆ.

ಭಸ್ಮನಾಶುಧ್ಯತೇಕಾಂಸ್ಯಂ ಕ್ಷಾರೇಣಾಯಸಮುಚ್ಯತೇ |
ತಾಮ್ರಮಾಮ್ಲೇನಪ್ರೈವಿಪ್ರಾ ಸ್ತ್ರಪುಸೀಸಕ ಯೋರಪಿ |
ಹೈಮನುದ್ಭಿಃಶುಭಂಪಾತ್ರಂ ರೌಪ್ಯಪಾತ್ರಂದ್ವಿಜೋತ್ತಮಾಃ ||

ಅಂದರೆ ಕಂಚು ಭಸ್ಮಧಿಂದಲೂ, ಕಬ್ಬಿಣವು ಉಪ್ಪಿನಿಂದಲೂ, ತಾಮ್ರ ಸೀಸ ತವರಗಳು ಹುಳಿಯಿಂದಲೂ, ಬಂಗಾರ ಬೆಳ್ಳಿಗಳು ನೀರಿನಿಂದಲೂ ಶುದ್ಧಗಳಾಗುತ್ತವೆಂದು ವೀರಶೈವ ಆಚಾರ ವಿಧಿಯು ಬೋಧಿಸುತ್ತದೆ. ಹಿತ್ತಾಳೆಯು ಮಣ್ಣಿನಿಂದ ಶುದ್ಧವಾಗುತ್ತದೆ. ಕಬ್ಬಿಣಕ್ಕೆ ಗೋಮೂಯದಿಂದಲೂ ಶುದ್ಧತೆಯುಂಟು ಆದಕಾರಣ ಈ ಶಾಸ್ತ್ರೀಯ ಪದ್ಧತಿಯ ಮೇರೆಗೆ ಪಾತ್ರೆಗಳನ್ನು ಶುದ್ಧಮಾಡುವದು ಸರ್ವೋತ್ತಮವೆಂದು ಹೇಳಲ್ಪಟ್ಟದೆ. ಮಣ್ಣಿನ ಪಾತ್ರೆಗಳು ಒಮ್ಮೆ ಉಪಯೋಗಿಸಿದ ಮೇಲೆ ಪುನಃ ಉಪಯೋಗಕ್ಕೆ ಬರುವದಿಲ್ಲ; ನಿಷಿದ್ಧಗಳಾಗುತ್ತವೆ. ಹೀಗಿದ್ದ ಪಾತ್ರೆಗಳನ್ನು ಯಾವಾಗಲೂ ಉಪಯೋಗಿಸಿ ಊಟಮಾಡಿದ ಸ್ಥಾನದಲ್ಲಿಟ್ಟು ಕಂಡ ಕಂಡ ಕೈಯಿಂದ ಮುಟ್ಟಿ ಪುನಃ ಅವೇ ಪಾತ್ರೆಗಳಲ್ಲಿ ಪಾಕವನ್ನುಮಾಡಿ ಶಿವಲಿಂಗಕ್ಕೆ ಆ ಅನ್ನವನ್ನು ನೈವೇದ್ಯ ಮಾಡುವದು ಮಹಾ ದೋಷವೆನಿಸುತ್ತದೆ. ಹಿತ್ತಾಳೆ ಮೊದಲಾದ ಪಾತ್ರೆಗಳನ್ನು ಬೆಳಗಿದರೆ ಅವು ಶುದ್ಧವಾಗುತ್ತವೆ. ಆದರಂತೆ ಮಣ್ಣಿನ ಪಾತ್ರೆಗಳನ್ನು ಬೆಳಗಿದರೆ ಶುದ್ಧವಾಗುವದಿಲ್ಲ. ಸಣ್ಣ ಸಣ್ಣ ಹುಡುಗರು ಎಂಜಲ ಕೈಗಳಿಂದ ಹರವಿ ಗಡಿಗೆಗಳನ್ನು ಮುಟ್ಟುವುದರಿಂದಲೂ ಒಂದೊಂದುವೇಳೆ ಎಂಜಲನೀರನ್ನೇ ಅವುಗಳಲ್ಲಿ ಚೆಲ್ಲುವದರಿಂದಲೂ, ಇಂಥ ಕೃತಿಯನ್ನು ಅಶಿಕ್ಷಿತ ಸ್ತ್ರೀಯರು ವಿಶೇಷವಾಗಿ ಮಾಡುವುದರಿಂದಲೂ ಈ ಪಾತ್ರೆಗಳನ್ನು ಆದಷ್ಟು ಮಟ್ಟಿಗೆ ಬಹಿಷ್ಕರಿಸಿ ಧಾತು-ಮಯ ಪಾತ್ರೆಗಳಲ್ಲಿಯೇ ಪಾಕವನ್ನು ರಚಿಸಿ ಶಿವಲಿಂಗಾರ್ಪಣ ಮಾಡುವುದೇ ಪವಿತ್ರಾಚರಣೆಯಾಗಿರುತ್ತದೆ. ಸ್ಮಾರ್ತ,ವೈಷ್ಣವಾದಿ ಬ್ರಾಹ್ಮಣರು ಎಂಥ ಬಡ

ಪರಿದ್ದರೂ ಮಣ್ಣಿನ ಪಾತ್ರೆಗಳನ್ನು ಎಂದಿಗೂ ಉಪಯೋಗಿಸುವದಿಲ್ಲ. ಆದ ಕಾರಣ ವೀರ ಶೈವ ಬ್ರಾಹ್ಮಣರು ಬಡವರೇ ಆಗಲಿ ಶ್ರೀಮಂತರೇ ಆಗಲಿ ಅವಷ್ಟು ಮಟ್ಟಿಗೆ ಹಿತ್ತಾಳೆ ಮೊದಲಾದ ಪಾತ್ರೆಗಳಲ್ಲಿಯೇ ಪಾಕವನ್ನು ಮಾಡುವ ಪದ್ಧತಿಯನ್ನಿಡಬೇಕು; ಇರಲಿ. ಶೂದ್ರಾದಿಯಾಗಿ ಪ್ರತಿಯೊಂದು ಜಾತಿಯವನು ಬಾಯಲ್ಲಿಟ್ಟುಕೊಂಡು ಕುಡಿದ ಎಂಜಲದಿಂದ ಕೂಡಿರುವ ಕಪ್ಪು ಬಸಿಯನ್ನು ಮತ್ತೊಬ್ಬನು ಕುಡಿಯುತ್ತಾನೆ. ಅದನ್ನೇ ಬೇರೊಬ್ಬನು ಕುಡಿಯುತ್ತಾನೆ; ಇದೊಂದು ನೂತನ ಯಮಲೋಕವೆಂದೇ ಹೇಳಬೇಕಾ ಗಿದೆ. ಈ ವಿಧವಾದ ಅಸಹ್ಯ ಕೃತಿಯನ್ನು ಮಾಡಲಿಕ್ಕೆ ಇವರ ಮನಸ್ಸಾದ ರೂ ಹೇಗೆ ಒಪ್ಪುವದೋ ಯಾರಿಗೂ ತಿಳಿಯದಾಗಿದೆ. ಇದರಿಂದ ಜಾತಿ ಧರ್ಮಗಳು ನಷ್ಟವಾಗುವದು ಒತ್ತಟ್ಟಿಗಿರಲಿ ಪಾಂಡು ಕ್ಷಯಮೇಹ ಸಂಗ್ರ ಹಣಿ ಕುಷ್ಠ ಇವೇ ಮೊದಲಾದ ರೋಗಗಳಿಂದ ಭರತ ಖಂಡದಲ್ಲಿ ಲಕ್ಷಾಂತರ ಜನರು ಮೃತ್ಯುವಿನ ಬಾಯಿಗೆ ತುತ್ತಾಗ ಹತ್ತಿದ್ದಾರೆ. ಕೆಲಕೆಲವರು ಮನೆ ಯಲ್ಲಿ ಶುದ್ಧ ಮಾಡಲಿಕ್ಕೆ ಬಾರದೆಯಿದ್ದ ಅಪವಿತ್ರವಾದ ಕಪ್ಪು-ಬಸಿಗಳನ್ನೇ ಶ್ರೀ ಸ್ವಾಮಿಗಳ ಹಾಗೂ ದೇವರ ಪೂಜೆಗೂ ಮತ್ತು ಹಾಲು-ಮೊಸರು-ತುಪ್ಪ ಇವೇ ಮೊದಲಾದ ಆಹಾರ ಸಾಮುಗ್ರಿಗಳನ್ನು ಹಾಕಿಕೊಂಡು ಗುರು-ದೇ ವರ ನೈವೇದ್ಯಕ್ಕೂ ಉಪಯೋಗಿಸುತ್ತಾರೆ. ಇಂಥ ಪಾಪಾತ್ಮರಿಗೆ ಶ್ರೀ ಪರ ಮಾತ್ಮನು ಯಾವಶಿಕ್ಷೆಯನ್ನು ವಿಧಿಸುವನೋ ತಿಳಿಯದಾಗಿದೆ. ಇನ್ನುಮೇ ಲಾದರೂ ಈ ವಿಷಯವನ್ನು ಚನ್ನಾಗಿ ತಿಳಿದುಕೊಂಡು ಸಾಂಸರ್ಗಿಕ ರೋಗ ಗಳನ್ನುಂಟು ಮಾಡುವ ಅಪವಿತ್ರವಾದ ಈ ಕಪ್ಪು ಬಸಿಗಳನ್ನು ಉಪಯೋ ಗಿಸುವದನ್ನು ಬಿಟ್ಟು ಶುದ್ಧ ಮಾಡಲಿಕ್ಕೆ ಬರುವ ಪವಿತ್ರವಾದ ಧಾತುಮಯ ಪಾತ್ರೆಗಳನ್ನು ಉಪಯೋಗಿಸಬೇಕು. ನಾವು ಕಪ್ಪು ಬಸಿಗಳನ್ನೇ ಉಪಯೋ ಗಿಸುತ್ತೇವೆನ್ನುವವರು ತಾವೊಬ್ಬರೇ ಉಪಯೋಗಿಸಿ ತೊಳೆದು ಅವುಗಳನ್ನು ಪವಿತ್ರ ಸ್ಥಾನದಲ್ಲಿರಿಸದೆ ಪವಿತ್ರ ವಸ್ತುಗಳಲ್ಲಿ ಕೂಡಿಸದೆ ಅವು ಯಾವಾಗಲೂ ಅಪವಿತ್ರವೆಂದೇ ಭಾವಿಸಿ ಗೊತ್ತು ಮಾಡಿದ ಒಂದು ಸ್ಥಳದಲ್ಲಿ ಬೇರೆಯಿಟ್ಟು ಹಸ್ತ ಪ್ರಕ್ಷಾಲನೆಯನ್ನು ಮಾಡಿಕೊಳ್ಳ ಬೇಕೆಂದು ಈ ಪುಣ್ಯಾತ್ಮರಿಗೆ ಅತ್ಯಂ ತ ಆಗ್ರಹದಿಂದ ಸೂಚಿಸುತ್ತೇವೆ.

೧೮

# ಸ್ತ್ರೀಯರ ಸೌಭಾಗ್ಯ

ಪತಿಯೇ ಪರದೈವವೆಂದು ನಂಬಿಕೊಂಡಿರುವ ಭಾರತೀಯ ನಾರೀ ಮಣಿಯರಿಗೆ ವಿವಾಹಸಮಯದಲ್ಲಿ ಪತಿಯ ಸ್ವರೂಪವು ಅವರ ಮನದಲ್ಲಿ ಸದಾ ಜಾಗ್ರತವಾಗಿರುವಂತೆ ತಾಳಿಯನ್ನು ಕಟ್ಟುವ ಪದ್ಧತಿಯು ಬಹು ಪ್ರಾಚೀನ ಕಾಲದಿಂದ ನಡೆದು ಬಂದಿರುತ್ತದೆ. ಇದಕ್ಕೆ ಮಾಂಗಲ್ಯವೆಂಬ ಹೆಸರು. ಇದುವೇ ಸ್ತ್ರೀಯರ ಸೌಭಾಗ್ಯವೂ ಮುತ್ತೈದೆಯರ ಲಕ್ಷಣವೂ ಆಗಿರುವುದು. ಇದನ್ನು ಕರಿಮಣಿ ಯೊಂದಿಗೆ ಸೇರಿಸಿ ಕೊರಳೊಳಗೆ ಹಾಕಿ ಕೊಳ್ಳುವ ಪದ್ಧತಿಯುಂಟು. ಕೆಲವರು ಬರೀ ಕರಿಮಣಿಯನ್ನೇ ಮಂಗಲ ಸೂಚಕವೆಂದು ಅವನ್ನೇ ಹಾಕಿಕೊಳ್ಳುತ್ತಾರೆ.

ಈ ಸೌಭಾಗ್ಯದ ಗುರುತಾಗಿ ಕಾಶ್ಮೀರದ ಸ್ತ್ರೀಯರು ಕೊರಳಲ್ಲಿ ರೇಸಿಮೆ ದಾರವನ್ನು ಕಟ್ಟಿ ಕೊಂಡು ಕಿವಿಯಲ್ಲಿ ಬಂಗಾರದ ಬೆಂಡೋಲೆ ಗಳನ್ನು ಧರಿಸುವರು. ಗುಜರಾಥೀಯರು ವಿವಾಹದ ಕಾಲಕ್ಕೆ ಪ್ರತಿಯೊಂ ದು ಅವಯವದ ತುಂಬಾ ಆಭರಣಗಳನ್ನು ಹಾಕಿಕೊಳ್ಳುತ್ತಾರಲ್ಲದೆ ನಡುಂ ದಲೆಯಲ್ಲಿ ಚೂಡಾಮಣಿ ಎಂಬ ಭೂಷಣವನ್ನು ಧರಿಸುತ್ತಾರೆ. ಇದುವೇ ಮಾಂಗಲ್ಯದ ಲಕ್ಷಣವೆಂದು ಅವರು ಭಾವಿಸಿದ್ದಾರೆ. ಉತ್ತರ ಭಾರತದ ಸ್ತ್ರೀಯರು ಮೂಗಿನಲ್ಲಿ ಮುತ್ತಿನ ಮುಕುರವನ್ನೂ ಕಾಲಲ್ಲಿ ಸರಪಳಿ (ಜೈನು) ಯನ್ನು ಹಾಕಿಕೊಳ್ಳುತ್ತಾರೆ. ಅವರಿಗೆ ಇದುವೇ ಪತಿಯ ಸಂಪತ್ತು ಬಂಗಾ ಲೀಯರು ಮದುವೆಯ ಕಾಲಕ್ಕೆ ಸ್ತ್ರೀಗೆ ವರನಿಂದಲೇ ಕುಂಕುಮ ಹಚ್ಚಿ

ಸುತ್ತಾರೆ. ಮತ್ತು ಕನ್ಯೆಯ ಕೈಗೆ ಒಂದು ಕಬ್ಬಿಣದ ಬಳೆ ಹಾಕುತ್ತಾರೆ. ಇದುವೇ ಅವರ ಶೋಭನದ ಚಿಹ್ನೆ. ಮದರಾಶಿಗಳು ಮೂಗಿನ ಎರಡೂ ಮಗ್ಗಲು ಚಿನ್ನದ ಮೂಗುಬೊಟ್ಟು ಹಾಕಿಕೊಂಡು ಒಂದು ವಿಶಿಷ್ಟ ತರದ ತಾಳಿಯನ್ನು ಕರೇಮಣಿಯಲ್ಲಿ ಸೇರಿಸಿ ಅರಿಷಿಣ ಮಿಶ್ರಿತವಾಗಿ ಕೊರಳೊಳಗೆ ಹಾಕಿಕೊಳ್ಳುತ್ತಾರೆ. ಮುಸ್ಲಿಮರು ಬಳೆ ಹೆಚ್ಚಾಗಿ ಧರಿಸುವದೇ ಮಂಗಲ ವೆಂದು ತಿಳಿಯುತ್ತಾರೆ. ಕ್ರಿಶ್ಚಿಯನ್ನರು ಶುಭ ದಿವಸದಲ್ಲಿ ಪತಿಯಿಂದ ಕೊಡಲ್ಪಟ್ಟ ಹೊಸ ಉಂಗುರವನ್ನು ಧರಿಸಿರುತ್ತಾರೆ. ಮತ್ತು ಅಂಗಿ ಬದ ಲಾಯಿಸಿ ಸೀರೆ ಉಡುತ್ತಾರೆ. ಇದೇ ಅವರ ಸೌಭಾಗ್ಯದ ಕುರುಹು.

ನಾನಾ ಪ್ರಾಂತಗಳಲ್ಲಿಯೂ ನಾನಾ ದೇಶಗಳಲ್ಲಿಯೂ ಹೀಗೆ ಪತಿ ಸೌಭಾಗ್ಯದ ಲಕ್ಷಣಗಳು ಬೇರೆ ಬೇರೆ ಯಾಗಿದ್ದರೂ ಪತಿತ್ವವುಳ್ಳ ಸ್ತ್ರೀಯ ರಿಗೇ ಎಲ್ಲೆಡೆಯೂ ಪ್ರಾಧಾನ್ಯವು ಕೊಡಲ್ಪಟ್ಟಿದೆ. ಇವರಿಂದ ನಡೆಸಲ್ಪಟ್ಟ ಕರ್ಮಗಳಿಗೇ ಫಲಪ್ರಾಪ್ತಿಯೆಂದು ನಂಬಿಕೆಯಿರುತ್ತದೆ. ಆದುದರಿಂದ ಸ್ತ್ರೀ-ಯರೆಲ್ಲರೂ ತಮ್ಮ ಮಂಗಲಭಾಗ್ಯಕ್ಕೆ ಆಧಾರನಾದ ಪತಿದೇವನನ್ನು ಧ್ಯಾನಿ ಸುತ್ತ, ಸೇವೆಮಾಡುತ್ತ ಸದಾ ಅವನ ನೆರಳನಂತಿದ್ದು ಸದ್ಗತಿಯನ್ನು ಹೊಂದು ವದು ಶ್ರೇಯಸ್ಕರ. ವೀರಶೈವ ಸ್ತ್ರೀಯರಂತೂ ತಮ್ಮ ಪತಿದೇವನ ಸೇವೆ ಯಲ್ಲದೆ ಇಷ್ಟಲಿಂಗಪೂಜಾಕ್ರಮುವನ್ನೂ, ಭಸ್ಮ-ರುದ್ರಾಕ್ಷಧಾರಣವನ್ನೂ ಕೈಕೊಂಡು ಗುರುಸೇವಾನಿರತರಾಗಿ ತನುಮನಧನಗಳನ್ನು ಗುರುಲಿಂಗಜಂಗ ಮರ ಸೇವೆಗೂ ಪತಿ ಸೇವೆಗೂ ಅರ್ಪಿಸಿ ಇಹಲೋಕ ವ್ಯಾಪಾರಗಳಿಂದ ದೂರರಾಗುತ್ತ ಸದಾ ಪರಶಿವನ ಚಿಂತನೆಯಲ್ಲಿಯೇ ಕಾಲಕಳೆದು ಸದ್ಗತಿ ಯನ್ನು ಹೊಂದಬೇಕಾಗಿರುವುದು. ಇದನ್ನು ಸರ್ವದೂ ತಿಳಿದು ಅದರಂತೆ ಆಚರಿಸಿ ಧನ್ಯಾತ್ಮರಾಗಲಿ.

(ಪಂಚಾಚಾರ್ಯ ಪ್ರಭಾ)



೧೯

# ಪತಿಸೇವೆ

ನನ್ನ ಪುತ್ಥಳಿ !

ನಿನ್ನ ಪತಿಯೇ ಕುಂಕುಮ ತಿಲಕ |
ನಿನ್ನ ಪತಿಯೇ ಮಂಗಲ ಪದಕ |
ನಿನ್ನ ಪತಿಯೇ ಪುಣ್ಯತೀರ್ಥೋದಕ |
ನಿನ್ನ ಪತಿಯೇ ದೇವರ ದೇವ |
ನಿನ್ನ ಪತಿಯೇ ಜೀವನ ಜೀವ |
ನಿನ್ನ ಪತಿಯೇ ಇಹಪರಗತಿದಾಯಕ |

ಎಂದು ನಂಬಿ ಅವನಲ್ಲಿ ಭಕ್ತಿವಿಶ್ವಾಸವನ್ನಿಟ್ಟು ಅವನ ಪಾದ ಸೇವೆಯನ್ನು ಮನಮುಟ್ಟಿ ಮಾಡು. ಅವನ ಮನಸ್ಸಿಗೆಬಾರದ ಯಾವ ಕೆಲಸವನ್ನೂ ಮಾಡಬೇಡ. ಯಾವ ದುಷ್ಟನುಡಿಗಳನ್ನೂ ಆಡಬೇಡ. ಮೊದಲು ಅವನ ಗುಣ ಸ್ವಭಾವಗಳನ್ನು ಚನ್ನಾಗಿ ಅರಿತುಕೊಂಡು ಅದರಂತೆ ನಡೆ. ನಿನಗೆ ಎಷ್ಟೇ ಸಂಕಟಗಳೊದಗಿದರೂ ಅವುಗಳನ್ನು ನಿನ್ನ ಗಂಡನೆದುರಿಗೆ ತೋರಬೇಡ. ಆತನೆದುರಿನಲ್ಲಿ ನೀನು ಯಾವಾಗಲೂ ಹಸನ್ಮುಖಿ (ನಗೆಮುಖಿ) ಯಾಗಿರು. ಸಂಕಟಗಳು ಕಡೆಯವರೆಗೂ ಇರುವುದಿಲ್ಲ. ನೀನು ಪತಿಯ ಮಾತಿಗೆ ಪ್ರತ್ಯುತ್ತರವನ್ನು ಎಂದೂ ಕೊಡಬೇಡ. ಮುಂದಿನ ಕವನವನು ಓದು

ಪತಿಯೆದುರು ವಾದಿಸುತ ಹೋರಾಡಬೇಡ |
ಪತಿ ನಿದ್ರಿಸುವ ಮೊದಲು ನಿದ್ರಿಸಬೇಡ |

ಪತಿಗೆ ಸೇರದುದನ್ನು ನೀನೆಸಗಬೇಡ|
ಪತಿಗೆ ಸುಖನಿದ್ರೆಯಿಂರಲೆಚ್ಚರಿಸಬೇಡ|

ನಿನ್ನ ಉತ್ತರ ಸರಿಯಾಗಿದ್ದರೂ ನಿನ್ನ ಪತಿಯು ಸಮಾಧಾನದಿಂದಿದ್ದಾಗ್ಗೆ ಸೌಮ್ಯವಾಗಿ ತಿಳಿಸು. ಅವನು ನಿನಗೆ ಸಲಗೆಯನ್ನು ಕೊಟ್ಟು ಅಥವಾ ನೀನು ಮಾಡಿದ್ದನ್ನೇ ಮಾನ್ಯಮಾಡುತ್ತಿದ್ದರೆ, ಅದರ ದುರುಪಯೋಗವನ್ನು ಮಾಡಿಕೊಂಡು ಮನಬಂದ ಹಾಗೆ ಮಾತನಾಡಬೇಡ. ಅದರ ಸದುಪಯೋಗ ಮಾಡಿಕೊಂಡು ಅವನೊಡನೆ ಯೋಗ್ಯವಾದ ಸಂಗತಿಗಳನ್ನು ಮಾತನಾಡು. ಮತ್ತು ಪತಿಯ ಸುಖದುಃಖಗಳಲ್ಲಿ ಪತ್ನಿಯಾದ ನೀನು ಭಾಗವಹಿಸಿ, ಅವನ ಸುಖದುಃಖಗಳನ್ನು ವಿಚಾರಿಸಿ ಅವುಗಳನ್ನು ದೂರಮಾಡುವಂತೆ ಆ ದಯಾನಿಧಿಯಾದ ಪರಮಾತ್ಮನನ್ನು ಪ್ರಾರ್ಥಿಸು. ಮತ್ತು ನೀನು ಧೈರ್ಯದಿಂದ ನಿನ್ನ ಕೈಲಾದಷ್ಟು ಪ್ರಯತ್ನಿಸು. ಸುಖ ಬಂದಾಗ್ಗೆ ಹಿಗ್ಗಬೇಡ. ದುಃಖ ಬಂದಾಗ್ಗೆ ಕುಗ್ಗಿ ಪತಿಯಲ್ಲಿ ಹೇಯ ಭಾವನೆಯನ್ನು ತಾಳಿ ಅಧೈರ್ಯಳಾಗಿ ಕೂಡ್ರದೆ ಸಾಧ್ಯವಿರುವಷ್ಟು ಪತಿಗೆ ಧೈರ್ಯಕೊಡಲಿಕ್ಕೆ ಪ್ರಯತ್ನಿಸು. ಅದಕ್ಕಾಗಿ ಸತಿಯರಿಗೆ ಅರ್ಧಾಂಗಿಯೆಂದೂ, ಗೃಹಿಣಿಯೆಂದೂ, ಕರೆದಿರುವರು. ಅರ್ಧಾಂಗಿ ಅಂದರೆ:— ಲಗ್ನವಾಗುವದಕ್ಕಿಂತ ಮುಂಚೆ ಎರಡಾಗಿದ್ದ ಜೀವವನ್ನು ಲಗ್ನಕಾಲದಲ್ಲಿ ಒಂದು ಮಾಡುವವದರದೆಸೆಯಿಂದ ಪತಿಯ ಪ್ರಾಣಸ್ವರೂಪವಾದ ತಾಳಿಯನ್ನು ಸತಿಯಳ ಕಂಠದಲ್ಲಿ ಕಟ್ಟುತ್ತಾರೆ. ಅದು ಕಾರಣವೇ ಸತಿಪತಿಗಳ ದೇಹವೆರಡಾದರೂ ಜೀವ ಒಂದೇ ಎಂದು ತೋರ್ಪಡಿಸ ಲೋಸುಗ ಅರ್ಧಾಂಗಿ ಎಂಬ ನಾಮವು ಸತಿಯಳಿಗೆ ಬಂದಿತು. ಆದ್ದರಿಂದ ಪತಿಯನ್ನು ದುರ್ಲಕ್ಷಿಸದೆ ಸಂರಕ್ಷಿಸುವದು ಸತಿಯಳ ಆದ್ಯ ಕರ್ತವ್ಯವಲ್ಲವೆ? ಇನ್ನು ಗೃಹಿಣಿ ಅಂದರೆ:— ಗೃಹ-ಮನೆ. ಮನೆಯು ಛಳಿ, ಮಳೆ, ಗಾಳಿ ಬಿಸಲುಗಳ ತಾಪವನ್ನು ತಾನು ಸಹಿಸಿಕೊಂಡು ಒಳಗಿರುವವರನ್ನು ಹೇಗೆ ಸಂರಕ್ಷಿಸುವದೋ ಅದರಂತೆ ಸತಿಯಾದವಳು ತನ್ನ ಅತ್ತೆ, ಮಾವ, ಭಾವ, ಮೈದುನ, ಮೊದಲಾದವರಿಂದ ಒದಗಿದ ಸಂಕಷ್ಟಗಳನ್ನು ತಾಳಿಕೊಂಡು ಹೋಗಬೇಕೆಂಬುದನ್ನು ತಿಳಿಯು

ಪಡಿಸುವದೇ ತಾಳಿ ಕಟ್ಟುವದರ ಉದ್ದೇಶ. ತಾಳಿ ಅಂದರೆ:— ತಡೆದು ಕೊಳ್ಳು ಅಥವಾ ತಾಳು ಎಂದರ್ಥ. ಇದರಿಂದಲೇ ಆಕೆ ಗ್ರಹಿಣಿ ಎಂಬುದು ವಿಶ್ವ ಸತ್ಯಂ.

ಇನ್ನು ಸ್ತ್ರೀಯರು "ಬಾಲ್ಯದಲ್ಲಿ ತಂದೆ ತಾಯಿಗಳ ಆಜ್ಞೆಯಂತೆ ಯೂ, ತಾರುಣ್ಯದಲ್ಲಿ ಪತಿಯ ಆಜ್ಞೆಯಂತೆಯೂ ವೃದ್ಧಾಪ್ಯದಲ್ಲಿ ಮಕ್ಕ ಳಾಜ್ಞೆಯಂತೆಯೂ" ಇರಬೇಕೆಂಬುದನ್ನು ಯಾರೂ ಮರೆಯಲಾಗದು. ಒಟ್ಟಿನಲ್ಲಿ ನಿನಗೆ ಹೇಳುವದೇನೆಂದರೆ ನೀನು ನಿನ್ನ ಪತಿಯ ನೆರಳಿನಂತೆ ಅವನನ್ನು ಅನುಸರಿಸಿ ನಡೆ. ಇವೇ ಪತಿವ್ರತಾ ಧರ್ಮವು.

ಈಗಿನ ಸ್ತ್ರೀಯರು ತಮ್ಮ ಗಂಡಂದಿರು ತಮ್ಮ ಮಾತನ್ನು ಕೇಳು ತ್ತಿದ್ದರೆ ಮಾತ್ರ ಕುಲು ಕುಲು ನಗುತ್ತ ಮಾತನಾಡುವರು ಹಾಗಾಗದಿದ್ದಲ್ಲಿ ಅವರ ಮೋರೆಯು ಯಾವಾಗಲೂ ಉರಿಯುತ್ತಿರುವದು. ತಂಗೀ ಇದು ಒಳ್ಳೇದಲ್ಲ. ಆದ್ದರಿಂದ ನೀನು ಯಾವಾಗಲೂ ನಿನ್ನ ಗಂಡನ ಮನಸ್ಸನ್ನು ಸಂತೋಷ ಪಡಿಸುತ್ತ ಅವನೊಡನೆ ನೀನು ಒಳ್ಳೇ ವಿನಯದಿಂದಲೂ, ಭಯ ಭಕ್ತಿಯಿಂದಲೂ ನಡೆಯ ತಕ್ಕದ್ದು. ತಿಳಿಯಿತೆ ?

ಇನ್ನು ಕೆಲವು ಗಂಡಸರು ಸಿಟ್ಟಿನ ಸ್ವಭಾವದವರಿರುತ್ತಾರೆ. ಕೆಲವರು ತಮ್ಮ ಹೆಂಡಂದಿರ ಮೇಲೆ ಅಂತರಂಗದಲ್ಲಿ ಪ್ರೇಮವುಳ್ಳವರಿದ್ದರೂ ಹೆಂಡರು ಅವರಿಗೆ ಸರಿಬಾರದಿರುವ ಶಬ್ದಗಳನ್ನು ಮಾತಾಡಿದರೆ ಸತಿಯರ ಬಗ್ಗೆ ಅವರಿಗಿರುವ ಪ್ರೇಮವು ಕಡಿಮೆಯಾಗುತ್ತಾ ಹೋಗುವದು. ಕೆಲವರು ಶಾಂತ ಸ್ವಭಾವದವರಿರುತ್ತಾರೆ. ಇನ್ನೂ ಅನೇಕರು ಅನೇಕ ಬಗೆಯಾಗಿರು ತ್ತಾರೆ. ನಿನ್ನ ಗಂಡನ ಮನಸ್ಸನ್ನು ತಿಳಿದುಕೊಂಡು ಅವನ ಮನಸ್ಸಿಗೆ ವಿರೋ ಧವಾಗದಂತೆ ನಡೆದುಕೊಂಡು ಕೊಟ್ಟಮನೆಗೂ, ಹುಟ್ಟಿದ ಮನೆಗೂ ಕೀರ್ತಿ ಯನ್ನು ತರಬೇಕು.

ಒಳ್ಳೇ ಪ್ರೀತಿಯಿಂದ ಸಂಸಾರವನ್ನು ಸಾಗಿಸುತ್ತ ಸಜ್ಜನರಾಗಿ ಸುಖ

ದಿಂದಿದ್ದ ಸತಿಪತಿಗಳನ್ನು ಕಂಡರೆ ಕೆಲವು ಹೆಣ್ಣುಮಕ್ಕಳಿಗೆ ಸಹನವೇ ಆಗುವದಿಲ್ಲ. ಅವರು ಸತಿ-ಪತಿಗಳ ನಿರ್ಮಲ ಪ್ರೇಮದಲ್ಲಿ ಮಣ್ಣೆರಚಲು ಪ್ರಯತ್ನಿಸುವದನ್ನು ನೀನೂ ಬಲ್ಲೆ. ಸತಿಯ ವಿಷಯಕ್ಕೆ ಪತಿಯಲ್ಲಿಯೂ ಪತಿಯ ವಿಷಯಕ್ಕೆ ಸತಿಯಲ್ಲಿಯೂ, ಏನಾದರೊಂದು ಚಾಡಿಯನ್ನು ಚುಚ್ಚಿ ಅವರೀರ್ವರ ಪ್ರೇಮಭಂಗ ಮಾಡಿದ ಹಾಗೂ ಮಾಡುತ್ತಿರುವ ಉದಾಹರಣೆಗಳು ಅನೇಕ ಉಂಟು. ಅಂಥವರ ಮಾತನ್ನು ನೀನು ಎಂದೂ ಕೇಳಬೇಡ.

ಗಂಡನನು ಬಿಟ್ಟವಳ ಸಂಗತಿಯು ಬೇಡ|
ಷಂಡನನು ಕೂಡಿದವಳ ಸಲುಗಿ ಬೇಡ|
ಭಂಡ ಕುಟಿಲಿಯೊಡನೆ ಮಾತನಾಡಬೇಡ|
ಚಂಡಿಯರ ಮುಂದೆ ನೀ ನಿಲ್ಲಬೇಡ|

ಇಂಥ ದುಷ್ಟ ಸ್ತ್ರೀಯರ ನೆರಳನ್ನು ಸಹ ನೋಡದಿರುವದು ಒಳ್ಳೇದು. ಇನ್ನು ಕೆಲವರು ನಿನಗೆ ಹೀಗೆ ಹೇಳಬಹುದು ! ಏನಂದರೆ 'ಏನೇ ನೀನು ಒಳ್ಳೇ ಧಿಟ್ಟೆಯು, ಗಂಡನ ಕೂಡ ನಗುವದೂ, ಅವನ ಕೂಡ ಒಳ್ಳೇ ಸಲುಗೆಯಿಂದ ಮಾತನಾಡುವದೂ, ಅವನು ಹೇಳಿದಂತೆ ಕುಣಿಯುವದೂ, ನಮಗಿದು ಸೇರುವದಿಲ್ಲ. ಬಿಡು! ನಾವುಹೊಸದಾಗಿ ಅದೇ ಗಂಡನಮನೆಗೆ ಬಂದಾಗ್ಗೆ ಊಟಕ್ಕೆ ಸಹ ನೀಡುತ್ತಿದ್ದಿಲ್ಲ. ಅವರು ಎಷ್ಟು ಮಾತಾಡಿಸಿದರೂ, ನಾವು ಗಂಟು ಮೋರೆಯನ್ನು ಹಾಕಿಕೊಂಡು ಸುಮ್ಮನಿರುತ್ತಿದ್ದೆವು. ಅವರು ಹತ್ತು ಸಲ ಮಾತಾಡಿಸಿದರೆ ನಾವು ಒಂದು ಸಲ ಮಾತಾಡುತ್ತಿದ್ದೆವು. ಎಂದು ಹೇಳುವ: ಮೂಢ ಪದ್ಧತಿಯುವರ ಮಾತಿಗೆ ನೀನು ಎಂದೂ ಕಿವಿಗೊಡಬೇಡ. ಅವರು ನಿನಗೆ ದುರ್ಬೋಧೆಯನ್ನೇ ಮಾಡುವರೆಂದು ತಿಳಿ. ಮತ್ತು ಅಂಥವರ ಕೂಡ ಒಳ್ಳೇ ಎಚ್ಚರಿಕೆಯಿಂದ ಇರಬೇಕು. ನೀನು ಒಬ್ಬರ ಮನೆಗೆ ಕೆಲಸವಿಲ್ಲದೆ ಹೋಗಬೇಡ. 'ಏಕೆಂದರೆ ಮನೆ ಮನೆ ತಿರುಗುವವರಿಗೆ ಮಾತು ಬಾರದೇ ಬಿಟ್ಟೀತೆ.' ಎಂಬ ನಾಣ್ಣುಡಿಯುಂಟು. ಇನ್ನು ಕೆಳಗಿನ ಪದ್ಯವನ್ನು ಲಕ್ಷಿಸು.

ಕಂಡ ಕಂಡಲ್ಲಿ ತಿರುಗಾಡ ಬೇಡವ್ವ।
ಭಂಡ ಹೆಂಗಸರಲ್ಲಿ ಕೂಡ ಬೇಡವ್ವ।
ದಿಂಡೆಯೊಲ್ ಗಂಡನನು ಕಾಡಬೇಡವ್ವ।
ಖಂಡಿತವು ! ಈ ನಡತೆ ಕೇಡು ನೋಡವ್ವ॥

ಆದ್ದರಿಂದ ನಿನ್ನ ಪತಿಯು ಹೊರಗೆಲ್ಲಿಯಾದರೂ ಹೋದ ವೇಳೆಯಲ್ಲಿ ನೀನು ಏನಾದರೂ ಹೊಲಿಯುವದನ್ನಾಗಲೀ, ಹೆಣೆಯುವದನ್ನಾಗಲೀ, ಯಾವುದಾದರೊಂದು ಉಪಯೋಗಕರವಾದ ಮನೆಯ ಕೆಲಸವನ್ನು ಮಾಡು. ಇಲ್ಲವೆ ಪುರಾಣ ಪುಣ್ಯಕಥೆಗಳನ್ನು ಓದುತ್ತ ಹೊತ್ತುಗಳೆ. ಇದರ ವಿಷಯಕ್ಕೂ ಕೆಳಗಿನ ಪದ್ಯವನ್ನು ನೋಡು.

ಹೊತ್ತುಗಳಿಯಲು ಬೇಡ ಬದುಕು ತೀರಿದ ಮೇಲೆ।
ವ್ಯರ್ಥ ಹರಟೆಯ ಮಾತು ದುಸ್ಸಂಗದಿಂದ।
ಸತ್ಯಶರಣರ ಸಂಗ ಸದ್ಗೋಷ್ಠಿ ಪೂಜೆಯೊಳ್।
ಹೊತ್ತುಗಳೆದರೆ ಮುಂದೆ ಬುತ್ತಿ ಕೇಳ್ ಮಗಳೇ।

—ಬಾಲಲೀಲಾ ಮಹಾಂತ ಶಿವಯೋಗಿಗಳು

ಮೇಲೆ ಬರೆದ ಮಹಾತ್ಮರ ಅಮೃತವಾಣಿಯನ್ನು ತಪ್ಪದೇ ಪಠಿಸುತ್ತಿರು.

ನಿನ್ನ ಹಿತಚಿಂಕ ತಂದೆ

(ಆತ್ಮವಿಚಾರ)



೨೦

# ಮಹಾ ತಾಯಿ ಬಿಜ್ಜಮಹಾದೇವಿ



ನಮ್ಮ ನಾಡಿನಲ್ಲಿ ಅದೆಷ್ಟೋಜನ ಶಿವಶರಣರು ಆಚಾರ-ವಿಚಾರ, ನಡೆ-ನುಡಿ, ಪರಿಶುದ್ಧವಾದ ಸದ್ಭಾವನೆ, ಆದರಣೀಯವಾದ ನೀತಿ ಮಾರ್ಗ ಪ್ರಾಣಿಗಳಲ್ಲಿರುವ ನಿಷ್ಕಲಂಕ ಪ್ರೀತಿ, ನಿಸರ್ಗವಾದ ಸರಳ ಸ್ವಭಾವ, ಕಾಯಕಕ್ಕನುಗುಣವಾದ ದೃಢಸಾಹಸ, ನಿಶ್ಚಲವಾದ ಚಿತ್ತ, ಶಿವಯೋಗ ಸಂಪನ್ನದಲ್ಲಿ ನಿಜಾನಂದ, ಪ್ರಜ್ವಲಿತವಾದ ಶಿವಭಕ್ತಿ, ಇವೆಲ್ಲವನ್ನು ಜನರಲ್ಲಿ ಒಡಮೂಡಿಸಿ ಇಹದಲ್ಲಿ ಮತ್ತು ಪರದಲ್ಲಿ ತಮ್ಮ ಕೀರ್ತಿ ಪ್ರಭೆಯನ್ನು ಹಬ್ಬಿಸಿ ಭಗವತ್ಕಟಾಕ್ಷಕ್ಕೆ ಪಾತ್ರರಾಗಿದ್ದಾರೆ.

ಇದಲ್ಲದೆ ಸುಗುಣ ಸಮೂಹದಿಂದೊಪ್ಪಿ ನಾಡಿನಲ್ಲಿ ತಮ್ಮ ಚರಿತೆಯನ್ನು ದೆಸೆದಿಸೆಗಳಲ್ಲಿಯೇ ಹರಡಿಸಿದ ಅಕ್ಕಮಹಾದೇವಿ. ಸತ್ಯಕ್ಕ ಗೊಗ್ಗವ್ವೆ, ಕೋಳೂರ ಕೊಡಗೂಸು ಮೊದಲಾದ ಶಿವಶರಣೆಯರು ಶಿವಭಕ್ತಿ ತತ್ಪರರಾಗಿ ತಮ್ಮ ಜೀವನವನ್ನು ಸಾರ್ಥಕ ಮಾಡಿಕೊಂಡಿದ್ದಾರೆ. ಅಂಥ ಶಿವಶರಣೆಯರ ಪಂಕ್ತಿಯಲ್ಲಿ ಬಿಜ್ಜಮಹಾದೇವಿಯಕ್ಕ ಒಬ್ಬಳು;

ಮೈಸೂರ ಸೀಮೆಯಲ್ಲಿ ಬಿಜ್ಜಾವರವೆಂಬ ಗ್ರಾಮವಿದೆ. ಆ ಗ್ರಾಮದಲ್ಲಿ ಧನ ಧಾನ್ಯ ಸಂಪತ್ತಿನಿಂದಲೂ, ಶಿವಭಕ್ತಿ ಪ್ರಭೆಯಿಂದಲೂ, ಜಂಗಮ ದಾಸೋಹದಿಂದಲೂ ಒಡಗೊಂಡಂಥ ಶಿವಭಕ್ತ ಶಂಕರನೆಂಬ ಬ್ರಾಹ್ಮಣ ಮನೆತನವು ನೆಲೆಗೊಂಡಿತ್ತು. ಈ ಶಿವಭಕ್ತನಿಗೆ ಭಾಗೀರಥಿ ಎಂಬ ಹೆಂಡತಿ

ಇದ್ದಳು. ಈ ಸಾಧ್ವಿಯ ಉದರದಿಂದ ಮನೆತನಕ್ಕೆ ತಕ್ಕಂತೆ ಸೌಂದರ್ಯ ಯುತ ಶಿವಭಕ್ತಿ ಶಿರೋಮಣಿ ಎನಿಸಿದ ಮಹಾ ಶಿವಶರಣೆ ಮಹಾ ದೇವಿ ಯಕ್ಕ ಜನಿಸಿದಳು.

ಇಹದಲ್ಲಿ ಹುಟ್ಟಿ ಈಕೆಯು ಸಾಮಾನ್ಯರಂತೆ ತನ್ನ ಬಾಳನ್ನು ನೂಕದೆ ನಿತ್ಯ ತನ್ನ ಮನೆಗೆಲಸಗಳನ್ನು ಮುಗಿಯಿಸಿ ಶಿವಭಜನೆ ಶಿವಕೀರ್ತನೆ ಯಲ್ಲಿಯೇ ಕಾಲಕಳಿಯುತ್ತಿದ್ದಳು. ಹೀಗೆ ಎಷ್ಟೋ ದಿವಸ ಗತಿಸಿದ ಮೇಲೆ ವಯಸ್ಸಿಗೆ ಬಂದ ಮಗಳನ್ನು ಮನೆಯಲ್ಲಿ ಇಟ್ಟುಕೊಳ್ಳುವದು ನ್ಯಾಯವಲ್ಲ. ಕಣ್ಣಿಲ್ಲದ ಸಮಾಜವು ಏನಾದರೂ ಅಪವಾದ ಹೊರಿಸೇ ಹೊರಿಸುತ್ತದೆ, ಎಂದು ತಿಳಿದು ತಮ್ಮ ಆಪ್ತೇಷ್ಟರಲ್ಲಿಯೇ ಲಗ್ನಮಾಡಲು ಈಕೆಯನ್ನು ತಂದೆ ತಾಯಿಗಳು ನಾನಾ ಬಗೆಯಾಗಿ ಹೇಳುವರು. ತಾಯಿಯ ಒಂದು ಬೋಧೆ ಯಿಂದಲೋ, ತಂದೆಯ ಒಂದು ಆಜ್ಞೆಯಿಂದಲೋ ಸಮಾಜದ ಒಂದು ಕಟ್ಟೆನಿಂದಲೋ ಮಹಾದೇವಿ ಲಗ್ನವಾಗುವಳು ಸಂಸಾರದ ಜಂಜಾಟದಲ್ಲಿ ಕಾಲ ಕಳೆಯುವದು ಬೇಡವಾಗಿದ್ದರೂ ಬಾಳಿಗೆ ಕಲಂಕ ಬರದಂತೆ ಅನ್ಯ ದೈವ ಪೂಜಕ ಪತಿಯೊಡನೆ ಸಂಸಾರರಥ ಸಾಗಿಸ ಹತ್ತಿದಳು

ಆದರೆ ಸಂಸಾರ ರಥವು ಒಂದೇ ಮಾಸ ಗತಿಸುತ್ತಿರುವಾಗಲೇ ರಥದ ಒಂದು ಗಾಲಿಯು ಮುರಿದಂತೆ ಪತಿಯು ಇಹಲೋಕವನ್ನು ತ್ಯಜಿ ಸಿದನು. ತರುಣಿ ಮಹಾದೇವಿಗೆ ಬಲವಾದ ಚಿಂತೆ ಹತ್ತಿತು. ಲಗ್ನವಾಗದೇ ಇದ್ದಿದ್ದರೆ ಪರಮ ಸುಖವಿತ್ತು. ಈಗ ಚಿಕ್ಕವಯಸ್ಸಿನಲ್ಲಿಯೇ ವಿಧವೆಯಾಗಿ ಕಾಲ ಕಳೆಯುವದೆಂತು ? ಎಂದು ಚಿಂತೆ ಮಾಡುವಳು. ಮಗಳ ಈ ಚಿಂತೆ ಯು ದೂರಾಗಲೆಂದು ತಂದೆ ತಾಯಿಗಳು ತವರೂರಿಗೆ ಕರೆತರುವರು. ತವರ ಮನೆಯಲ್ಲಿ ಮಹಾದೇವಿ ಯಾವಾಗಲೂ ಶಿವಪೂಜಾ, ಶಿವಭಜನೆಯಲ್ಲಿಯೇ ಕಾಲ ಕಳೆಯುತ್ತಿರುವಾಗಲೇ ಇಳಿ ವಯಸ್ಸಿಗೆ ಬಂದ ತಂದೆ ತಾಯಿಗಳೂ ಸಹ ಶಿವಾಧೀನರಾದರು. ಗಾಯದ ಮೇಲೆ ಬರೆಕೊಟ್ಟಂತೆ ಅಕ್ಕನ ಜೀವನಕ್ಕೆ ದೊಡ್ಡ ಪೆಟ್ಟು ತಗಲಿತು, ಆಗಲಿ ಹಣೆಯ ಬರಹದಲ್ಲಿ ಇದ್ದ

ಪ್ಪಾಗುವದು ಎಂಬ ದೃಢನಿಶ್ಚಯವಮಾಡಿ ನೂಲುವ ಕಾಯಕವನ್ನು ಕೈಕೊಂಡು ಶಿವಧ್ಯಾನದಲ್ಲಿ ಕಾಲಕಳೆಯ ಹತ್ತಿದಳು.

ಶಿವಮಾಸ ಶ್ರಾವಣದಲ್ಲಿ ನಿತ್ಯ ಮಠಕ್ಕೆ ಹೋಗಿ ಶಿವಕೀರ್ತನೆಯನ್ನು ಕೇಳುವ ಪರಿಪಾಠವನ್ನು ಇಟ್ಟುಕೊಂಡಿದ್ದಳು. ಅದೇಪ್ರಕಾರ ಮಠಕ್ಕೆ ಹೋಗಿ ಏಕಚಿತ್ತದಿಂದ ಕೀರ್ತನೆಯನ್ನು ಕೇಳುತ್ತಿರುವಾಗ ಕೀರ್ತನಕಾರರು ಶಿವನ ವಿಷಯವಾಗಿ ಕೆಲವು ಮಾತುಗಳನ್ನು ಹೇಳುವರು.

ಹೆಂಡರಿಬ್ಬರು ಕೇಳಿ, ಮುಂಡೇರು ಕದನಿಗಳು
ಬಂಡಾಗಿ ಶಿವನು ಮನೆಬಿಟ್ಟು ! ಸೇರಿದನು
ರುಂಡ ಧಾರ್‍ಯಾಗಿ ಸುಡಗಾಡ
ಮಕ್ಕಳವನಿಗೆ ಮೂರು, ಮಿಕ್ಕ ಊಳಿಗವುಂಟು
ಕಕ್ಕುಸವ ಬಿಡುವ ಸುಖವಿಲ್ಲ ತಾಯಿಯನೆ
ಮಿಕ್ಕುವರುಂಟೆ ಜಗದೊಳಗೆ

ಶಿವನು ಸೃಷ್ಟಿಕರ್ತನೂ ಅವರ ಪರಿಪಾಲಕನಾಗಿಯೂ ಅನಾಥನಾಗಿರುವದನ್ನು ಈ ಪ್ರಕಾರವಾಗಿ ಬಣ್ಣವಿಟ್ಟು ಬಣ್ಣಿಸಿದುದ ಕೇಳಿ ಶಿವಶರಣೆ ಮಹಾದೇವಿಯ ಮನ ಕರಗಿತು. ಹಾಗೆಯೇ ಕೀರ್ತನವನ್ನು ಕೇಳಿ ಮನೆಗೆ ಬಂದು ಊಟ ಉಪಚಾರವೆನ್ನದೆ ಹಾಸಿಗೆಯಲ್ಲಿ ಒರಗಿಕೊಂಡು, ಮನಸ್ಸಿನಲ್ಲಿ ಪರಮಾತ್ಮನ ವಿಷಯವಾಗಿ ಚಿಂತಿಸುವಳು.

"ಹೇ ದೇವಾ ! ಜಗತ್ಪಾಲಕನಾದ ನೀನು ಹೆಂಡಿರ ಕದನದಲ್ಲಿ ಎಲ್ಲವನ್ನೂ ತ್ಯಜಿಸಿ ರುಂಡ ಮಾಲೆಯ ಧರಿಸಿ ಸ್ಮಶಾನ ವಾಸಿಯಾಗಿ ತಿರುಗಾಡುವದು ನಿನಗೆ ಅಸಹ್ಯವೆನಿಸಲಿಲ್ಲವೇ? ನಾನಾತರದ ವಸ್ತ್ರಗಳಿಂದ ಅಲಂಕೃತನಾಗುವದನ್ನು ಬಿಟ್ಟು ಮೈತುಂಬ ಬೂದಿ ಬಡಿದು ಚರ್ಮವನು ಹೊದ್ದುಕೊಂಡು ತಿರುಗುವದು ನಿನಗೆ ಭೂಷಣವೇ ? ಹೊನ್ನಿನ ಹೊಳೆಯನ್ನೇ ಹರಿಸುವ ನೀನು ಹಾವುಗಳನ್ನೇ ಆಭರಣ ಮಾಡಿಕೊಳ್ಳುವದೇ ? ಹೆಂಡರ ಮಕ್ಕಳ

ಕದನದಲ್ಲಿ ಸಿಲುಕಿರುವ ನಿನಗೆ ಸುಖಶಾಂತಿ ಎಲ್ಲಿಂದ ದೊರಕುವವು ಶಿವ ಲಿಂಗ ! ಎಂದು ಮನದಲ್ಲಿಯೇ ಮರಮರನೆ ಮರಗುವಳು ಜಡಿಗಟ್ಟಿದ ನಿನ್ನ ಕೇಶರಾಶಿಯನ್ನು ಹಿಡಿದು ಹಿಂಜಿ ಮಂಜು ಹರಿಯುವದರೊಳಗಾಗಿ ರಂಜ ಣಗಿಯ ತುಂಬ ನೀರಕಾಸಿ ಎರೆದು ಸಲಹುವೆನುತಾಯಾಗಿ; ಬಾ ಶಿವಲಿಂ ಗ !" ಎಂದು ಉದ್ಗಾರ ತೆಗೆಯುವಳು.

ಮಹಾ ಶಿವಶರಣೆ ಹಾಗೆಯೇ ಮರಗುತ್ತ ಮಲಗಿದ್ದಳು. ಅದೇ ರಾತ್ರಿ ಪರಮಾತ್ಮನು ಆಕೆಯ ಕನಸಿನಲ್ಲಿ ಬಂದು ನಸುನಗೆಯಿಂದ ಹೇಳು ತ್ತಾನೆ-"ದೇವೀ ನೀನು ನನ್ನ ತಾಯಿಯಾಗಲು ಯೋಗ್ಯಳಿರುವೆ ಮಾತೆ. ಆಗಲಿ ನೀನು ನನ್ನನ್ನು ಮಗನನ್ನಾಗಿ ಮಾಡಿಕೊಳ್ಳುವದಾದರೆ ಇದೇ ಸಮೀಪ ದಲ್ಲಿರುವಅಡವಿಯಲ್ಲಿ ಒಂದು ಅರಳಿಯ ಗಿಡಕ್ಕೆ ಕಟ್ಟಿದ ತೊಟ್ಟಿಲಲ್ಲಿ ಇರುವೆನು ಅಲ್ಲಿಂದ ನನ್ನನ್ನು ತೆಗೆದುಕೊಂಡು ಬಾ ತಾಯಿ;" ಎಂದು ಹೇಳಿ ಮಾಯ ವಾಗುವನು. ಶಿವಶರಣೆ ಮಹಾದೇವಿ ಗಾಬರಿಗೊಂಡು ಕಣ್ದೆರೆದು ನೋಡುವ ಳು. ಎಲ್ಲವೂ ಬಯಲೇ ಬಯಲು. ಆಗಲಿ ಈಗಂತೂ ಹಾಗೆಯೇ ಮಲಗಿ ಪ್ರಾತಃಕಾಲದಲ್ಲಿ ಈ ಸಂಗತಿಯನ್ನು ಪರೀಕ್ಷಿಸಿದರಾಯಿತು. ಎಂದು ಮತ್ತೆ ಮಲಗಿಕೊಂಡಳು.

ಮೂಡಣ ದಿಗಂತದಲ್ಲಿ ಕೆಂಬಣ್ಣ ಹರಡುವದರೊಳಗಾಗಿ ಅರಣ್ಯ ದಲ್ಲಿ ಶಿಶುವನ್ನರಸುತ್ತಿದ್ದಳು. ಅರಸುತ್ತ ಅರಸುತ್ತ ಕಾಡಿನ ಮಧ್ಯದೊಳು ಬಂದಳು. ಅಲ್ಲೊಂದು ಚಿಗರೆಯು ತನ್ನ ಮರಿಗೆ ಮೊಲೆ ಉಣಿಸುವದನ್ನು ನೋಡಿ, ನಾನೆಂದು ಶಿಶು ಶಿವಲಿಂಗನಿಗೆ ಈ ಚಿಗರೆಯಂತೆ ಮೊಲೆ ಹಾಲು ಕುಡಿಸುವೆನೋ, ಎಂದು ಯೋಚಿಸುವಷ್ಟರಲ್ಲಿ ಎಳೆಗೂಸಿನ ಧ್ವನಿಯೊಂದು ಕೇಳಿಸಿತು. ಮಹಾದೇವಿಯು ಕಿವಿನಿಮಿರ್ಚಿಸಿ ಆ ಹಸಗೂಸಿನ ಧ್ವನಿಯನ್ನು ಕೇಳಿ ಅಕಡೆ ಹೋಗುವಳು. ಅಲ್ಲಿಯೇ ಭವ್ಯ ಅರಳಿಯ ಗಿಡದಡಿಯಲ್ಲಿ ನಿರಾಕಾರಾದ ಬಯುಲೇ ತೊಟ್ಟಿಲವಾದ ತೊಟ್ಟಿಲಲ್ಲಿ, ಸುಂದರ ಚೆನ್ನಿಗ ಕೈಕಾ ಲಾಡಿಸುತ್ತ ಕನಸಿನ ಶಿಶುವು ಬಾಲಲೀಲೆಯಲ್ಲಿ ಲೋಲವಾಗಿತ್ತು. ಆ ಕೂಸ

ನ್ನು ನೋಡಿದೊಡೆ ಆನಂದವು ಉಕ್ಕೇರಿತು. ಕೈಯಿಂದ ಮುಟ್ಟಿದರೆ ಮಾಸೀ ತೆನ್ನುವಂತಿರುವ ಆ ದಿವ್ಯ ಶಿಶುವನ್ನು ಕಣ್ತುಂಬ ನೋಡಿದಳು. ಆವಾಗೆ ಬಾಲಲೀಲೆಯಂಲ್ಲಿ ಲೋಲನಾದ ಶಿವಲಿಂಗ ಅವ್ವಾ ಅವ್ವಾ ಎಂದು ಕೈ ಮಾಡಿದಾಗ ಬಾ ನನ್ನ ಮುದ್ದು ಕುವರಾ ಎಂದು ಉಡಿಯಲ್ಲೆತ್ತಿ ಮುದ್ದಾ ಡಿದಳು. ಶಿವನಕೃಪೆ ತನಗಾಯಿತೆಂದು, ತನ್ನ ತಾಯಿತನ ಫಲಿಸಿತೆಂದು ಮನದಲ್ಲಿ ಸಂತಸಪಡುತ್ತ ಸಡಗರದಿಂದ ಮನೆಗೆ ಬಂದಳು,

ಮನೆಯಲ್ಲೊಂದು ತೊಟ್ಟಿಲಕಟ್ಟಿ ತನಗೆ ಪ್ರಿಯವಾದ ಶಿವಲಿಂಗ ನೆಂಬ ಹೆಸರನ್ನಿಟ್ಟು ತೊಟ್ಟಿಲದಲ್ಲಿ ಕೂಸನ್ನು ಮಲಗಿಸಿ "ಲಾಲಿ ಲಾಲಿ ಪರಬ್ರಹ್ಮದ ಶಿಶುವೆ" ಎಂದು ಸಖಿಯರೊಂದಿಗೆ ಮಂಜುಳ ಕಂಠದಿಂದ ಜೋಗುಳ ಪಾಡಿದಳು. ತೊಟ್ಟಿಲವು ತನ್ನಿಂದ ತಾನೆ ತೂಗಾಡುವು. ಹೊತ್ತು ಮುಳುಗಿದರೂ ಸಹ ಶಿಶುವಿನ ಸುತ್ತಲೂ ಬೆಳಕು ಇರುವದು. ಇಂಥ ಸನ್ನಿ ವೇಶಗಳನ್ನು ನೆರೆದಿರುವ ಸಖಿಯರು ನೋಡಿ ಆಶ್ಚರ್ಯ ಪಡುವರು ಆವಾಗ ತಾಯಿ ಮಹಾದೇವಿ ಮಗುವಿಗೆ ದೃಷ್ಟಿಯಾದೀತೆಂದು ಮೂರು ದಾರಿಯು ಮಣ್ಣು, ಉಪ್ಪು ಮೆಣಸಿನಕಾಯಿ ತಂದು ವಟಗುಡುತ್ತ ದಿಟ್ಟಿ ಇಳಿಸಿದಳು ಶಿಶು ಶಿವಲಿಂಗ ಬಿದಿಗಿಯ ಚಂದ್ರನಂತೆ ಆರುತಿಂಗಳವರೆಗೆ ಯಾವರೋಗ ವಿಲ್ಲದೆ ಬೆಳೆದನು. ಮಹಾದೇವಿಯಾದರೂ ಬಹು ಪ್ರೀತಿಯಿಂದ ಜೋಕೆ ಮಾಡಿದಳು.

ಭಕ್ತಿಯು ಮಾರ್ಗ ಎಷ್ಟು ಸುಲಭವೋ, ಅಷ್ಟೇಗಹನವಾದುದ ಶಿವನು ಭಕ್ತರ ಭಕ್ತಿಯನ್ನು ಅಡಿಗಡಿಗೂ ಪರೀಕ್ಷಿಸುತ್ತಾನೆ. ಭಕ್ತರ ಮನ ವನ್ನು ಚಣ ಚಣಕ್ಕೂ ಜಡಿದು ನೋಡುತ್ತಾನೆ. ಅವರನ್ನು ಪಣ್ಣು ಮಾಡುತ್ತಾನೆ ಮಸಿಯ ಮಾಡತ್ತಾನೆ. ಅದು ಅವನ ಸ್ವಭಾವವೋ ಏನೋ! ತನಗೆತಾಯಿಯಂತೆಇದ್ದ ಮಹಾದೇವಿಯನ್ನು ಈ ಪರೀಕ್ಷೆಗೆ ಹೊರಪಡಿಸುವಂತಿರಲಿಲ್ಲ; ತಾಯಿಯ ಭಕ್ತಿ ಪರೀ ಕ್ಷೆಗೆ ಮೊದಲಾಯಿತು. ಇದ್ದಕ್ಕಿದ್ದಂತೆಯೇ ಆ ಕೂಸು ಮೊಲೆಯುಣ್ಣುವದನ್ನು ಬಿಟ್ಟಿತು. ಹೊಳೆಯುವ ಕಂಗಳು ಕವಡಿಯಂತೆ ಬೆಳ್ಳಗಾದವು. ಮೊಗದಕಾಂತಿ ಯು ಕುಂದಿ ಕಪ್ಪಿಡುವದು. ಹೂವಿನಂತೆ ಮೃದುವಾದ ದೇಹ ಬಾಡುವದು.

ಬಾಡಿದುದನ್ನು ನೋಡಿ ಚಿಂತಾಕ್ರಾಂತಳಾಗಿ ಅಯ್ಯೋ ಎಂದು ಗೋಳಿಡು ವಳು. ಹೀಗೆ ೮-೧೦ ದಿವಸ ಗತಿಸಿತು' ಮಹಾದೇವಿಯ ಚಿಂತೆ ಹೆಚ್ಚಿತು ದುಃಖವು ಆವರಿಸಿತು. ಈ ವಿಚಿತ್ರ ಬೇನೆಯನ್ನು ಕಳೆಯಲು ಎಲ್ಲ ಉಪಾಯ ಗಳನ್ನು ಮಾಡಿ ನಿರುಪಾಯಳಾದಳು. ಹಗಲಿರುಳು ಶಿವಲಿಂಗ ಶಿವಲಿಂಗವೆಂದು ಕನವರಿಸುವಳು. ಶಿಶುವು ಕಣ್ಣು ಮುಚ್ಚಿದ್ದು ತೆರೆಯಲೇ ಇಲ್ಲ ಆಗ ಮಹಾ ದೇವಿಯು ನೀನು ಕಣ್ಣು ಮುಚ್ಚುವದರೊಳಗಾಗಿ ನಾನೆ ಸಾಯುವೆನು ಎಂದು ಬಯಕೆ ಬರಿದಾದ ಮಹಾದೇವಿಯು ಒಂದು ಕತ್ತಿಯನ್ನು ತೆಗೆದು ಕೊಂಡು ತನ್ನ ರುಂಡಕ್ಕೆ ಹೊಡೆದುಕೊಳ್ಳುತ್ತಿರುವಷ್ಟರಲ್ಲಿ ಆಗ ಪರಮಾತ್ಮನು ಆಕೆಯ ಭಕ್ತಿಗೆ ಮೆಚ್ಚಿ, ತಾಯಿ ಇದ್ದರೆ ಇರಬೇಕು ಲೋಕದಲ್ಲಿ ನಿನ್ನಂತಹ ತಾಯಿ ಆಗಲಿ, ಮಾತೆ ಏನು ಬೇಡುವೆ ಬೇಡು ಎಂದು ಶಿವನು ತನ್ನನಿಜ ರೂಪವನ್ನು ತೋರಿಸುವನು. ಆವಾಗ ಮಹಾದೇವಿಯು, ದೇವಾ ! ನೀನು ನಿರೋಗಿಯಾಗಿ ಇರುವದೇ ನನಗೆ ಬೇಕಾಗಿದೆ; ಎಂದು ಹೇಳಿದಾಗ ಶಿವನು ನಕ್ಕು. "ಎಂಥ ಹುಚ್ಚಳು ನೀನು ! ನಾನು ಯಾವಾಗಲೂ ನಿರೋಗಿಯಾ ಗಿಯೇ ಇರುವೆನು ನಿನಗದರಚಿಂತೆ ಬೇಡ ಆದರೆ ನೀನು ಏನು ಬೇಡುವೆ ಬೇಡು." ಎಂದು ಕೇಳಿದಾಗ "ದೇವಾ! ನಿನ್ನ ಭಕ್ತಿಯೊಂದನ್ನುಳಿದು ನನಗಿನ್ನು ಬೇರೆ ಮುಕ್ತಿ ಬೇಕಾಗಿಲ್ಲ; ನಿನ್ನ ಧ್ಯಾನ ಒಂದನ್ನೇ ಕರುಣಿಸು." ಎಂದು ಕೇಳಿಕೊಂಡಾಗ ಮಹಾದೇವನು ಮಹಾತಾಯಿ ಬಿಜ್ಜಮಹಾದೇವಿಯನ್ನು ತನ್ನಲ್ಲಿ ಐಕ್ಯ ಮಾಡಿಕೊಂಡನು.

(ಸುಕುಮಾರ)



# ಆರ್ಯರ ಪವಿತ್ರ ಭಾವನೆಯ ಸದ್ವಿಚಾರ

ಗ್ರಾಮ್ಯ ಧರ್ಮೇತ್ಯುಜೇನ್ನಾರೀ| ಮನುತ್ತನಾಂ
ರಜಸ್ವಲಾಂ | ಅಪ್ರಿಯಾಮಪ್ರಿಯಾಚಾರಾಂ | ದುಷ್ಟ
ಸಂಕೀರ್ಣ ಮೇಹನಾಂ || ಅತಿಸ್ಥೂಲಕೃಶಾಂ
ಸೂತಾಂ | ಗರ್ಭಣೀಮನ್ಯ ಯೋಷಿತಂ | ವರ್ಣ
ನೀಮನ್ಯಯೋನಿಂಚ............ ||೧||

ಇತಿ ವಾಗ್ಭಟಕಾರ.

ಮುಟ್ಟಾದವಳು, ಬಾರಲುಬಿದ್ದವಳು, ಕೆಟ್ಟ ನಡತೆಯವಳು ಸೇರ ದಿದ್ದವಳು, ಸಂಕುಚಿತ ಶರೀರವುಳ್ಳವಳು, ಗರ್ಭಿಯುಳ್ಳವಳು, ಪರ್ಮಿಯು ಳ್ಳವಳು ಅತಿಸ್ಥೂಲಳು, ಬಹು ಕೃಶಳು, ಹಡೆದವಳು, ಬಸುರು ಇದ್ದವಳು, ತನಗೆ ಸಂಬಂಧವಿಲ್ಲದವಳು, ಬ್ರಹ್ಮಚಾರಿಣಿಯು, ಹಾಗೂ ಅಮಾನುಷ ಯೋನಿಯುಳ್ಳವಳು ಇತ್ಯಾದಿ ಸ್ತ್ರೀಯರೊಡನೆ ಮೈಥುನ ಮಾಡಬಾರದೆಂದು ಹೇಳಿದ್ದಾರೆ.

ಕ್ಷಣಮಾತ್ರ ಜನಿತರತಿಸುಖ |
ಕಣಮುಂ ನೆನೆನಚ್ಚಿಮೆಚ್ಚಿ ವೈಯ್ಯಂಮನಮುಂ |
ಪಣಮುಂತೆತ್ತನುದಿನಮಾ |
ಗಣಿಕೆಯ ಮೊಡವೆರೆವ ಮನುಜನೇಂಗಾವಿಲನೋ ||೧||

ನೀತಿಕಾರ

ಕ್ಷಣಮಾತ್ರವಾದ ಅಲ್ಪಸುಖಕ್ಕಾಗಿ ಯಾವಾಗಲೂ ವೇಶ್ಯಾಂಗನೆಯರಿಗೆ ಶರೀರವನ್ನೂ, ಹಣವನ್ನೂಕೊಟ್ಟು ಇಹ ಪರದ ನಿತ್ಯ ಸುಖವನ್ನು ನೀಗಿಕೊಳ್ಳುವ ಮನುಷ್ಯನು ಎಂಥಾ ಪಾಮರನೋ !!! ಇವನ ಮೂರ್ಖತ್ವಕ್ಕೆ ಸರಿಯಿಲ್ಲ.

ಸ್ತ್ರೀಯೋಹಿ ಮೂಲಂ ನಿಧನಸ್ಯ ಪುಂಸಃ |
ಸ್ತ್ರೀಯೋಹಿ ಮೂಲಂ ವ್ಯಸನಸ್ಯ ಪುಂಸಃ |
ಸ್ತ್ರೀಯೋಹಿ ಮೂಲಂ ನರಕಸ್ಯ ಪುಂಸಃ |
ಸ್ತ್ರೀಯೋಹಿ ಮೂಲಂ ಕಲಹಸ್ಯ ಪುಂಸಃ ||೧||

ಸುಭಾಷಿತಕಾರ

ಗುರುಭಕ್ತಿವಿಹೀನಸ್ಯ ಸಮಸ್ತಾನಿಷ್ಫಲಾಃಕ್ರಿಯಾಃ |
ಅನುಷ್ಠಿತಾ ಅಪಿತಥಾ ಸ್ವೈರಿಣೀವ್ರತವಚ್ಛಿವೇ ||೧||

ಪಾರಮೇಶ್ವರಾಗಮ

'ಭಾರ್ಯಾಮೂಲಂ ತ್ರಿವರ್ಗಸ್ಯ ಭಾರ್ಯಾಮೂಲಂ ತರಿಷ್ಯತಃ |'

ಧರ್ಮಶಾಸ್ತ್ರ

ಮೂಳಿಗೆಯ ಮನೆ ಲೇಸು ಗೂಳಿಯಾ ಪಶುಲೇಸು |
ಈಳಿಯಾ ಹಿತ್ತಲಿರಲೇಸು ಪತಿವ್ರತೆಯ |
ಬಾಳು ಲೇಸೆಂದ ಸರ್ವಜ್ಞ ||೧||

ನಾರಿಸ್ವರ್ಗದದಾರಿ ನಾರಿನರಕದದಾರಿ |
ನಾರಿ ಮಹಾತಿ ವಿಷಾರಿ |
ನಾರಿಯೇ ಮಾರಿ ಸರ್ವಜ್ಞ ||೧||

ನೀತಿಯ ನರಿವನೆ ಪುರುಷಂ |
ಮಾತುಗಳಂ ಕೆಡಿಸಿನುಡಿಯದಾತನೆ ಚತುರಂ |

ಪ್ರೀತಿಯು ಮಾಳ್ಪನೆ ನೆಂಟಂ।
ಭೀತಿಯೊಳಿಪ್ಪವಳೆ ಹೆಣ್ಣು ಶ್ರೀಗೌರೀಶಾ ॥೧॥

ನೀತಿಕಾರ

ಕನಕದಸಿಂಹಾಸನದೊಳ್ ।
ಶುನಕನ ತಂದಿರಿಸಿ ಪಟ್ಟಗಟ್ಟಲುಮುತ್ತಂ।
ಮನಕೆರಳಿ ಜೋಗಳ್ವುದಲ್ಲದೆ।
ಘನತರ ಕೆಳಿಸುವದೆ ಮುಕ್ತಿ ರಾಮೇಶ್ವರನೇ ॥೧॥

ನೀತಿಕಾರ

ಈ ಪ್ರಕಾರವಾಗಿ ನಮಗೆ ಅನಾದಿಕಾಲದಿಂದಲೂ ಅನೇಕರು ಉಪದೇಶ ಮಾಡುತ್ತ ಬಂದಿದ್ದಾರೆ. ಇದು ಎಲ್ಲ ಮಾನಪ್ರಾಣಿಗಳಿಗೆ ತಿಳಿದ ವಿಷಯವಾಗಿದೆ. ಹೀಗೆ ತಿಳಿದಾಗ್ಯೂ ಕಾಮನನ ಉದ್ರೇಕವು ಬಲಿಷ್ಟವಾದುದರಿಂದ ನಮ್ಮಂಥ ಬಲಹೀನರ ಮನಸ್ಸನ್ನು ಮೋಹಪರವಶಗೊಳಿಸಿ ತೀವ್ರವೇ ಕೆಡವಿಬಿಡುವದು. ನಮ್ಮ ಮನಸ್ಸಿನ ದುರ್ಬಲತೆಯೇ ಈ ಮೋಹದ ಉಚ್ಚಾಟನಕ್ಕೆ ಕಾರಣವಾಗಿರುವದು; 'ಮನಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ।' ಎಂಬಂತೆ ನಮ್ಮ ಮನಸ್ಸು ನಮ್ಮನ್ನು ಬಂಧನದೊಳಗೆ ನುಗಿಸಲಿಕ್ಕೂ ಹಾಗು ಬಂಧನದಿಂದ ಹೊರಗೆ ತೆಗೆಯುಲಿಕ್ಕೂ ಮೂಲ ಕಾರಣವಾಗಿರುವದು. ಆದುದರಿಂದ ಪ್ರತಿಯೊಬ್ಬ ಸ್ತ್ರೀಪುರುಷರಿಗೂ ಆತ್ಮಸಂಯಮವು ಅವಶ್ಯಬೇಕು ಪೂರ್ವಕಾಲದಲ್ಲಿ ಸ್ತ್ರೀಯರು ಪತಿವ್ರತೆಯರಾಗಿಯೂ, ಪುರುಷರು ಏಕಪತ್ನಿ ವ್ರತಸ್ಥರಾಗಿಯೂ ಆಚರಿಸುತ್ತ, ಆರೋಗ್ಯ ಸ್ಥಿತಿಯಲ್ಲಿ ಕಾಲಕಳೆದಿದ್ದಾರೆ. ಈಗಮಾತ್ರ ನಾವೆಲ್ಲರು ಆ ವ್ರತಕ್ಕೆ ಬಹಿಷ್ಕಾರವನ್ನೇ ಹಾಕಿಬಿಟ್ಟಿರುವೆವೆಂಬಲ್ಲಿ ತಿಲಮಾತ್ರ ಸಂಶಯವಿಲ್ಲ. ಕಾಲಾಯ ತಸ್ಮೈನಮಃ

## ೨೨

# ಅಕ್ಕ-ತಂಗಿಯರಿಗೆ ಸದ್ಬೋಧ



೧) ಸ್ತ್ರೀಯರು ಭಾರತೀಯ ಸಂಸ್ಕೃತಿ ಅನುಸರಿಸಬೇಕು. ಸ್ತ್ರೀಯೆಂದರೆ ಪುರುಷನ ಆಪತ್ಕಾಲದಲ್ಲಿ ಉತ್ಸಾಹ ಮತ್ತು ಮಾರ್ಗದರ್ಶನದ ಆಗರ ಅವಳು ನೈತಿಕ ಹಾಗೂ ಆಧ್ಯಾತ್ಮಿಕ ಶಕ್ತಿಯನ್ನು ಬೆಳಿಸಿಕೊಳ್ಳಬೇಕು. ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀಯಳ ಪಾತ್ರವು ಮಹತ್ವದ್ದಿರುತ್ತದೆ. ಕಾರಣ ಸುಲಭವಾದ ಪಾಶ್ಚಿಮಾತ್ಯ ಸಂಸ್ಕೃತಿಗೆ ಮರೆಹೋಗಬಾರದು.

೨) ನಾನೆಂಬ ಅಹಂಕಾರವು ಯಾರಿಗೂ ತರವಲ್ಲ; ಅಹಂಕಾರವು ನಾಶಕ್ಕೆ ಕಾರಣ. "ನಾನೆಂದ ಶಿಶುಪಾಲ ಶಿರವಿತ್ತ ಚಕ್ರಕ್ಕೆ | ನೀ-ನೆಂದ ದ್ರೌಪತಿಯ ಮಾನಕಾಯ್ದ ಹರಿಯು |" ಇದನ್ನರಿತು ಅಹಂಕಾರರಹಿತರಾಗಿ ನಿಮ್ಮ ಪತಿಯಲ್ಲಿಯೂ, ಗುರು-ಹಿರಿಯರಲ್ಲಿಯೂ ವಿನಯದಿಂದ ವರ್ತಿಸು.

೩) ನೀವು ಯಾವುದಾದರೊಂದು ಕೆಲಸಕ್ಕೆ ಖರ್ಚುಮಾಡಬೇಕಾದರೆ ಮಿತಿಯಿಂದ ಮಾಡಿರಿ. ಯಾವ ಮಾತಾದರೂ ಮಿತಿಮೀರಿತೆಂದರೆ ಅದು ಅನಾದರಕ್ಕೂ ಬೇಸರಕ್ಕೂ ಲುಕ್ಸಾನಕ್ಕೂ ಕಾರಣವಾಗುವದು.

ಮಿತಿಯಿಂ ಮಾಡಿದ ಕಾರ್ಯಂ |
ಸತತಂ ಸುಖವನ್ನು ಕೊಡುವುದೆಲೆಲೈ ಮನುಜಾ |
ಮಿತಿಯಿಂ ಮೀರಿದ ಕಾರ್ಯವು |
ಅತಿಕಷ್ಟವ ಕೊಡದೆ ಬಿಡದು ಆರ್ಯಶ್ರೇಷ್ಠಾ |

ಈ ನೀತಿಯ ಪದ್ಯವನ್ನಾದರೂ ತಿಳಿದುಕೊಂಡು ನಿಮ್ಮ ದುಂದುಗಾರಿಕೆಯನ್ನು ದೂರೀಕರಿಸಿರಿ.

೪) ನೀವು ಯಾವ ಕೆಲಸವನ್ನು ಮಾಡಿದರೂ ಸ್ವಚ್ಛವಾಗಿ ವೇಳೆಗೆ ಸರಿಯಾಗಿ ನಿಮ್ಮ ಶಕ್ತ್ಯನುಸಾರಮಾಡಿರಿ. ಅದರಲ್ಲಿ ಮಾತ್ರ ಮೈಗಳ್ಳತನವನ್ನು ಮಾಡಬೇಡ. ಮತ್ತು ಎರಡನೆಯವರನ್ನು ಸರಿಗಟ್ಟಬೇಡ.

೫) ಎಂಥವರಿಗಾದರೂ ಒಮ್ಮೊಮ್ಮೆ ತಪ್ಪಾಗುವದು ಸಹಜ, ಆದರೂ ಕೂಡ ಆ ತಪ್ಪಿಗೆ ಒಪ್ಪಿಕೊಂಡು ಸತ್ಯವನ್ನು ಹೇಳಬೇಕು. "ಸತ್ಯಕ್ಕೆ ಸಾವಿಲ್ಲ" ಸುಳ್ಳಿಗೆ ಸುಖವಿಲ್ಲ" ಆದುದರಿಂದ ಅಸತ್ಯವನ್ನು ಸಂಪೂರ್ಣಬಿಟ್ಟು ಸತ್ಯವನ್ನು ಹೇಳುವುದಕ್ಕೆ ಸಹಾಸಮಾಡು.

೬) ಪರರ ವಸ್ತ್ರ-ಒಡವೆಗಳನ್ನು ಕಳವು ಮಾಡಬಾರದು, ಇದರಿಂದ ಮಾನಹಾನಿಯಾಗುವುದಲ್ಲದೆ ಶಿಕ್ಷಕ್ಕೂ ದಂಡಕ್ಕೂ ಪಾತ್ರರಾಗಬೇಕಾಗುವದು. ಮತ್ತು ಕಳ್ಳತನದಿಂದಗಳಿಸಿದ್ದು ಸ್ಥಿರವಾಗಿ ಉಳಿಯಲಾರದು. ಅನ್ಯಾಯದಿಂದ ಗಳಿಸಿದ್ದು ಅನ್ಯಾಯಕ್ಕೆ ಖರ್ಚಾಗುವುದೆಂದು ಜ್ಞಾನಿಗಳು ಸಹ ಹೇಳುತ್ತಾರೆ; ಕಾರಣ ಕಳ್ಳತನವನ್ನು ಸರ್ವಥಾ ಮಾಡಬೇಡ.

೭) ತಂಬಾಕ ತಿನ್ನುವದು, ನಾಶಿಪುಡಿ ಏರಿಸುವದು, ಚಹಾ-ಕಾಫಿ ಕುಡಿಯುವದು, ತತ್ತಿ-ಮಾಂಸವನ್ನು ತಿನ್ನುವುದು, ವ್ಯಭಿಚಾರ ಮಾಡುವದು ಇತ್ಯಾದಿಗಳೆಲ್ಲಾ ದುಶ್ಚಟಗಳೆನಿಸುವವು. ದುಶ್ಚಟವು ಶರೀರವನ್ನು ಕೆಡಿಸಿ ಅನಾರೋಗ್ಯವನ್ನುಂಟು ಮಾಡಿ ಇಹ-ಪರದಲ್ಲಿ ಅಪಕೀರ್ತಿಯನ್ನುಂಟುಮಾಡಿ, ಅಧೋಗತಿಗೀಡು ಮಾಡುವುದಲ್ಲದೆ ಶೀಘ್ರದಲ್ಲಿಯೇ ಮೃತ್ಯುವಿನ ಬಾಯಿಗೆ ತುತ್ತಾಗಬೇಕಾಗುವುದು. ಆದುದರಿಂದ ದುಶ್ಚಟಗಳನ್ನು ದೂರೀಕರಿಸು.

೮) ಬಾಯಿಯನ್ನು ಯಾವಾಗಲೂ ಹಿಡಿತದಲ್ಲಿಟ್ಟುಕೊಳ್ಳಿರಿ. ಯಾರಿಗೂ ಯಾವಾಗಲೂ ಮನ ನೊಯ್ಯುವಂತೆ ಬಿರಿಸು (ಕೆಟ್ಟ) ಮಾತುಗಳನ್ನಾಡಬೇಡ ಶಸ್ತ್ರಗಾಯಕ್ಕಿಂತಲೂ ಮಾತಿನ ಗಾಯವು ಹೆಚ್ಚಿನದು. "ಬಾಯಿಯ ಕೊಬ್ಬಿಂ ಬೈಯ್ಯುವ ಮನುಜಗೆ| ಗಾಯವು ತಾಗದೆ ಬಿಟ್ಟೀತೆ?

ಈ ಪ್ರಕಾರ ನೀತಿಕಾರರು ಸಹ ಹೇಳುತ್ತಾರೆ. ಆದ್ದರಿಂದ ವಿಚಾರದಿಂದ ಮಾತನಾಡು.

೯) ಸ್ತ್ರೀಯಳು ತಮ್ಮ ಪತಿಯನ್ನು ಒಲಿಸಿಕೊಳ್ಳಬೇಕಾದರೆ ತಮ್ಮ ಸದ್ಗುಣಗಳಿಂದ ಒಲಿಸಿಕೊಳ್ಳಬೇಕೇ ಹೊರ್ತು, ಮಣಿಮಂತ್ರ ಔಷಧೋಪಚಾರಗಳಿಂದ ಒಲಿಸಿಕೊಳ್ಳಲಿಕ್ಕೆ ಪ್ರಯತ್ನ ಪಡಬಾರದು.

೧೦) ಯಾವಾಗಲೂ ಹಗಲು ಮಲಗಬೇಡ, ಮತ್ತು ಮೈಥುನವನ್ನು ಮಾಡಬೇಡ.

೧೧) ಬಾಳೆಯ ಗಿಡಕ್ಕೆ ತಾನು ಬಿಡುವ ಗೊನೆಯೇ ಮೃತ್ಯು ಮನೆಗೆ ದುಷ್ಟಳಾದ ಹೆಂಗಸೇ ಮೃತ್ಯು.

೧೨) ಏನೊಂದೂ ಕೆಲಸ ಮಾಡದೆ ಉಂಡುಂಡು ಸುಮ್ಮನೆ ಕುಳಿತುಕೊಳ್ಳಬೇಡ, ಇದರಿಂದ ಆರೋಗ್ಯ ಕೆಡುವುದಲ್ಲದೆ ನಿನ್ನಲ್ಲಿ ಮೇದೋರೋಗ ಹುಟ್ಟುವದು; ಮೇದೋರೋಗವು ಗರ್ಭಧಾರಣ ಶಕ್ತಿಯನ್ನು ಹಾಳು ಮಾಡುತ್ತದೆ; ಕಾರಣ ಮನೆಗೆಲಸ ಮಾಡು. 'ವ್ಯಾಯಾಮಂ ವ್ಯಾಧಿನಾಶಂಚ' ಎಂಬ ಉಕ್ತಿಯಂತೆ ದಿನಾಲು ತಪ್ಪದೆ ಒಂದೆರಡು ಮೈಲು ಬೈಲು ಸೀಮೆಯಲ್ಲಿ ತಿರುಗಾಡು.

೧೩) ನಿಮಗೆ ಭಯಂಕರ ಕಷ್ಟಗಳು ಕಂಠದ ವರೆಗೆ ಬಂದರೂ ಯಾರ ಮೇಲೆಯೂ ಸಿಟ್ಟಿಗೇಳದೆ ಸಹಿಸ(ತಾಳ)ಬೇಕು. ಮತ್ತು ಅಂತಹ ಪ್ರಸಂಗದಲ್ಲಿ ಗುರು-ದೇವರನ್ನು ಭಕ್ತಿಯಿಂದ ಪೂಜಿಸಿ ಪ್ರಾರ್ಥಿಸಬೇಕು. ಇದರಿಂದ ನಿಮ್ಮ ಕಷ್ಟಗಳು ದೂರಾಗುವದಲ್ಲದೆ ಗೌರವವೂ ಹೆಚ್ಚುವದು.

೧೪) ಮಲ-ಮೂತ್ರ ಬಿಡುವ ಕಾಲದಲ್ಲಿ ಯಾರೂ ಮಾತಾಡಬಾರದು. ಸದ್ಯಃ ಹೆಣ್ಣು-ಮಕ್ಕಳಿಗೆ ಬಹಿರ್ಭೂಮಿಯು ಸಭೆಯ ಮಂಟಪವೇ ಆಗಿ ಶುಭಾಶುಭ ಮಾತುಗಳ ಉಪನ್ಯಾಸಕ್ಕೆ ಕಾರಣವಾಗಿರುವದು ಆದ ಕಾರಣ ಸುಶಿಕ್ಷಿತರು ಈ ಅಮಂಗಲ ಪದ್ಧತಿಯನ್ನು ಆದಷ್ಟು ಮಟ್ಟಿಗೆ ಬೋಧಿಸಿ ತಪ್ಪಿಸತಕ್ಕದ್ದು.

೧೫) ಮಲ-ಮೂತ್ರ ವಿಸರ್ಜನೆಮಾಡಿ ಮನೆಗೆ ಬರುವಕಾಲಕ್ಕೆ ಎಡಹಸ್ತದಿಂದ ತಂಬಿಗೆಯನ್ನೂ ಬಟ್ಟೆಯನ್ನೂ ಮುಟ್ಟಬಾರದು.

೧೬) ಮನೆಗೆ ಬಂದನಂತರ ಎರಡೂ ಹಸ್ತಗಳನ್ನೂ ತಂಬಿಗೆಯನ್ನೂ ಶುದ್ಧ ಮಣ್ಣಿನಿಂದ ತಿಕ್ಕಿ ತೊಳೆಯಬೇಕು.

೧೭) ಎಂಜಲ ಅಥವಾ ಮೈಲಿಗೆ ಕೈಯಿಂದ ಪಾಕಾದಿಗಳನ್ನು ಪಾತ್ರೆಗಳನ್ನೂ ಬಟ್ಟೆಗಳನ್ನೂ ಮುಟ್ಟಬಾರದು.

೧೮) ವೀರಶೈವ ಹೆಣ್ಣುಮಕ್ಕಳು ಹಚ್ಚೆಯನ್ನು ಚುಚ್ಚಿಕೊಳ್ಳಬಾರದು.

೧೯) ವೀರಶೈವ ಮಹಿಳೆಯರು ಲಗ್ನವಾಗುವ ಪೂರ್ವದಲ್ಲಿಯೇ ಶಿವದೀಕ್ಷೆಯನ್ನು ಹೊಂದಬೇಕು.

೨೦) ಉಟ್ಟುಕೊಂಡು ಬಟ್ಟೆ(ವಸ್ತ್ರ)ಯಿಂದ ಲಿಂಗಮೂರ್ತಿಯ ದ್ರವವನ್ನು ಒರಿಸಬಾರದು.

೨೧) ಯಾವ ಮನೆಯಲ್ಲಿ ಹೆಣ್ಣುಮಕ್ಕಳು ದಿನಾಲು ಕಣ್ಣೀರನ್ನು ಸುರಿಸುವರೋ ಆ ಮನೆಗೆ ಅನಿಷ್ಟವೆಂದು ತಿಳಿಯಬೇಕು.

೨೨) ಕನ್ಯಾವಿಕ್ರಯವನ್ನು (ತೆರವು ತೆಗೆದು ಕೊಳ್ಳೋಣ) ಮಾಡಬಾರದು

೨೩) ರೂಢಿಯಲ್ಲಿದ್ದರೂ ಶಾಸ್ತ್ರವಿರುದ್ಧವೆಂದು ಕಂಡು ಬಂದಲ್ಲಿ ಅದನ್ನು ತ್ಯಜಿಸಿ ಶಾಸ್ತ್ರೀಯವಾದ ಮಾರ್ಗವನ್ನು ಕೈಕೊಳ್ಳುವಲ್ಲಿ ಸಂದೇಹ ಪಡಬಾರದು.

೨೪) ನಮ್ಮ ಸಮಾಜದಲ್ಲಿ ಕೆಲವು ಹೆಣ್ಣುಮಕ್ಕಳು ಮಾತ್ರ ಎರಡೇ ಬೆರಳುಗಳಿಂದ ವಿಭೂತಿಯನ್ನು ಧರಿಸುತ್ತಾರೆ. ಈ ಅಮಂಗಲ ಪದ್ಧತಿಯನ್ನು ಬೇಗನೆ ಕಿತ್ತುಹಾಕಿ ಮೂರು ಬೆರಳುಗಳಿಂದ ಭಸ್ಮವನ್ನು ಧರಿಸಬೇಕು.

೨೫) ಪಂಚಮಹಾ ಪಾತಕಗಳು:— ಸ್ವರ್ಣಸ್ತೇಯ, ಸುರಾಪಾನ, ಗುರುಪತ್ನೀಗಮನ, ಬ್ರಹ್ಮಹತ್ಯ, ಮಹಾಪಾತಕಿ ಸಂಸರ್ಗ, ಇತ್ಯಾದಿ,

೨೬) ಪಂಚಮಾತೃಗಳು:— ರಾಜಪತ್ನಿ, ಗುರುಪತ್ನಿ. ಭ್ರಾತೃಪತ್ನಿ, ಪತ್ನೀಮಾತಾ, ತನ್ನ ಹೆತ್ತತಾಯಿ, ಇತ್ಯಾದಿ.

೨೭) ಪಂಚ ಪಿತೃಗಳು:— ತನ್ನನ್ನು ಹುಟ್ಟಿಸಿದವನು, ವಿದ್ಯಾ

ಹೇಳಿದವನು, ಆಪತ್ಕಾಲದಲ್ಲಿ ರಕ್ಷಿಸಿದವನು, ಅನ್ನವಿಟ್ಟು ರಕ್ಷಿಸಿದವನು, ಬ್ರಹ್ಮೋಪದೇಶ ಮಾಡಿದವನು' ಇತ್ಯಾದಿ.

೨೮) ದೇವದ್ರವ್ಯಂ ಗುರುದ್ರವ್ಯಂ ಜಂಗಮದ್ರವ್ಯಮೇವಚ |
ಯೇಹರಂತಿ ಮಹಾಮೋಹಾತ್ತೇಷಾಂ ವಂಶಕ್ಷಯೋ ಭವೇತ್ ||

ಯಾರು ದೇವರ ದ್ರವ್ಯವನ್ನೂ, ಗುರುಗಳ ದ್ರವ್ಯವನ್ನೂ, ಜಂಗಮರ ದ್ರವ್ಯವನ್ನೂ ಅಪಹರಿಸುವರೋ ಅವರ ವಂಶವು ನಾಶನಾಗುವದೆಂದು ಶಾಸ್ತ್ರವು ಘಂಟಾಘೋಷವಾಗಿ ಸಾರುತ್ತಿರುವದು ಆದ್ದರಿಂದ ವಿಚಾರ ಮಾಡಿ ವರ್ತಿಸು.

೨೯) ನಿಮಗೆ ಬರತಕ್ಕ ದುಡ್ಡನ್ನು ನೆನಪಿಟ್ಟು ಕಾಳಜಿಯಿಂದ ವಸೂಲಿ ಮಾಡುವಂತೆ ನೀವು ಕೊಡತಕ್ಕ ದುಡ್ಡನ್ನು ಲಕ್ಷ್ಯದಲ್ಲಿಟ್ಟು ಪ್ರೀತಿಯಿಂದಕೊಡುವುದನ್ನು ಕಲಿಯಿರಿ; ಇದೇನಿಜವಾದ ಸಾತ್ವಿಕ ಮನುಷ್ಯನಲಕ್ಷಣ

೩೦) ವಾಗ್ದಾನ ಅಂದರೆ:— ಬಾಯಿಂದ ಕೊಡುವುದು ಎಂದರ್ಥ. ಬಾಯಿಂದ ಹೇಳಿದಂತೆ ಕೈಯಿಂದ ತೀವ್ರ ಕೊಡಬೇಕು; ಅಂದರೆನಿಮ್ಮ ಜನ್ಮ ಸಾರ್ಥಕ ಇಲ್ಲವಾದರೆ ನಿರರ್ಥಕ. ಕೊಟ್ಟವಚನವನ್ನು ತಪ್ಪದೆ ಪಾಲಿಸುವವರೇ ಮಹಾತ್ಮರು.

ಈಗ ಪ್ರಪಂಚದಲ್ಲಿ ಸರಿಯಾದ ಶಾಸ್ತ್ರಜ್ಞಾನವೂ ಇಲ್ಲದೆ ಲೋಕಜ್ಞಾನವೂ ಇಲ್ಲದೆ ಜನಗಳು ಕೆಡುತ್ತಲಿದ್ದಾರೆ. ಪ್ರತಿಯೊಬ್ಬರೂ ತಮ್ಮದೇ ಹೆಚ್ಚೆಂದು ಹೊಗಳಿಕೊಳ್ಳುತ್ತಿದ್ದಾರೆ. ಮತ್ತುತಾವು ಮಾಡಿದ್ದೇ ಮಾನ್ಯವೆಂದೂ ಮುಖ್ಯವೆಂದೂ ನುಡಿಯುತ್ತಿದ್ದಾರೆ; ಇದು ಯಾರಿಗೂ ಭೂಷಣವಲ್ಲ. ಆದ್ದರಿಂದ ಪ್ರತಿಯೊಂದು ಜಾತಿಯ ತಾಯಂದಿರು ಈ ಪುಸ್ತಕವನ್ನು ದಿನಾಲು ಪಠಿಸುತ್ತ ಇದರೊಳಗಿನ ಉತ್ತಮ ವಿಷಯುಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ವರ್ತಿಸಿದರೆ, ನಿಮ್ಮ ಜನ್ಮವು ಸಾರ್ಥಕವಾಗುವುದಲ್ಲದೆ ಇಹದಲ್ಲಿ ಕೀರ್ತಿಯನ್ನೂ ಪರದಲ್ಲಿ ಸದ್ಗತಿಯನ್ನೂ ಹೊಂದಿ, ಪತಿವ್ರತಾ ದೇವತೆಯಾದ ಗಿರಿಜಯ ಸಂಪೂರ್ಣಾನುಗ್ರಹಕ್ಕೆ ಪಾತ್ರರಾಗುವಿರೆಂದು ನಿಶ್ಚಯವಾಗಿ ಹೇಳಬಹುದು.

ಓಂ ಶಾಂತಿಃ ! ಶಾಂತಿಃ !! ಶಾಂತಿಃ !!!

# ಶ್ರೀ ಪಾರ್ವತೀದೇವ್ಯಷ್ಟೋತ್ತರ ಶತನಾಮಾವಲಿಃ

ಓಂ ಉಮಾಯ್ಯೈ ನಮಃ
ಮಾಹೇಶ್ವರ್ಯೈ ನಮಃ
ಕಾಳ್ಯೈ ನಮಃ
ಗಿರಿಜಾಯ್ಯೈ ನಮಃ
ಶಾಂಕರ್ಯೈ ನಮಃ
ಶಿವಾಯ್ಯೈ ನಮಃ
ಪಾರ್ವತ್ಯೈ ನಮಃ
ಚಂಡಿಕಾಯ್ಯೈ ನಮಃ
ಗೌರ್ಯೈ ನಮಃ
ಜಗನ್ಮಾತ್ರೇ ನಮಃ ||೧೦||
ಶಿವಪ್ರಿಯಾಯ್ಯೈ ನಮಃ
ಚಂದ್ರ ಚೂಡಾಯ್ಯೈ ನಮಃ
ತ್ರಿನೇತ್ರಾಯ್ಯೈ ನಮಃ
ಶಾಂಭವ್ಯೈ ನಮಃ
ಸಿಂಹವಾಹಿನ್ಯೈ ನಮಃ
ಗಜಾಸ್ಯಜನನ್ಯೈ ನಮಃ
ಲೋಕಪೂಜಿತಾಯ್ಯೈ ನಮಃ
ಅಭಯಂಕರ್ಯೈ ನಮಃ
ವೇದಮಾತ್ರೇ ನಮಃ
ಗಾಯತ್ರ್ಯೈ ನಮಃ ||೨೦||
ವಿಶ್ವಾಧಾರಾಯ್ಯೈ ನಮಃ
ಆತ್ಮ ರೂಪಿಣ್ಯೈ ನಮಃ
ಕಾತ್ಯಾಯನ್ಯೈ ನಮಃ
ಮಹಾ ಮಾಯಾಶಕ್ತ್ಯೈ ನಮಃ
ತ್ರಿವಿಧ ರೂಪಿಣ್ಯೈ ನಮಃ
ಅನೇಕ ರೂಪಿಣ್ಯೈ ನಮಃ
ಭದ್ರಾಯ್ಯೈ ನಮಃ
ಸೌಮ್ಯಾಯ್ಯೈ ನಮಃ
ಅಪರ್ಣಾಯ್ಯೈ ನಮಃ
ಅಂಬಿಕಾಯ್ಯೈ ನಮಃ ||೩೦||
ನಿತ್ಯ ಪ್ರದಾಯ್ಯೈ ನಮಃ
ಅಮೃತಾಯ್ಯೈ ನಮಃ
ಸಿತ್ಯಾಯ್ಯೈ ನಮಃ
ಶರ್ವಾಣ್ಯೈ ನಮಃ
ಭೈರವ್ಯೈ ನಮಃ
ದಾಕ್ಷಾಯಣ್ಯೈ ನಮಃ
ಮಹಾದೇವ್ಯೈ ನಮಃ
ಕೈಲಾಸ ನಿಲಯಾಯ್ಯೈ ನಮಃ
ಸ್ಥಿರಾಯ್ಯೈ ನಮಃ
ಹಿಮಾದ್ರಿ ಜಾಯ್ಯೈ ನಮಃ ||೪೦||

ನಿರಾ ಕಾರಾಯೈ ನಮಃ
ವಿಂಧ್ಯಾಚಲ ನಿವಾಸಿನ್ಯೈ ನಮಃ
ಸರ್ವ ಸೌಖ್ಯಾಯೈ ನಮಃ
ದೃಢಾಯೈ ನಮಃ
ಸಿದ್ಧಾಯೈ ನಮಃ
ಸಾಮಗಾನ ವಿನೋದಿನ್ಯೈ ನಮಃ
ಕಲ್ಯಾಣ್ಯೈ ನಮಃ
ಕರುಣಾಯೈ ನಮಃ
ಶಾಂತಾಯೈ ನಮಃ
ನೃಡಾನ್ಯೈ ನಮಃ ||೫೦||
ಮುಕ್ತಿ ರೂಪಿಣ್ಯೈ ನಮಃ
ಲಕ್ಷ್ಮೀ ಪ್ರದಾಯೈ ನಮಃ
ಲಸನ್ಮೂರ್ತ್ಯೈ ನಮಃ
ಕುಮಾರ್ಯೈ ನಮಃ
ಕುಟಿಲಾಲ ಕಾಯೈ ನಮಃ
ಸುರಸ್ತ್ರೀ ವಂದಿತಾಯೈ ನಮಃ
ಶುದ್ಧಾಯೈ ನಮಃ
ಶುಭಾಂಗ್ಯೈ ನಮಃ
ಸುಲೋಚನಾಯೈ ನಮಃ
ಮೇನಾತ್ಮಜಾಯೈ ನಮಃ ||೬೦||
ಹರಾರ್ಧಾಂಗ್ಯೈ ನಮಃ
ನಿಶುಂಭಾಸುರ ಮರ್ದಿನ್ಯೈ ನಮಃ
ತ್ರಿಲೋಕ ವಂದ್ಯಾಯೈ ನಮಃ
ರುದ್ರಾಣ್ಯೈ ನಮಃ
ಸರ್ವಸಂಪತ್ಪ್ರದಾಯಿನ್ಯೈ ನಮಃ
ಶುಂಭದೈತ್ಯ ಹರಾಯೈ ನಮಃ
ಸಾಧ್ವ್ಯೈ ನಮಃ
ರಕ್ತಬೀಜ ಪ್ರಭಂಜಿನ್ಯೈ ನಮಃ
ಚತುರ್ಭುಜಾಯೈ ನಮಃ
ಅಷ್ಟ ಭುಜಾಯೈ ನಮಃ ||೭೦||
ಸುಸಹಸ್ರ ಭುಜಾಯೈ ನಮಃ
ಆಯುತ ಭುಜಾಯೈ ನಮಃ
ಚಂಡಮುಂಡ ಹರಾಯೈ ನಮಃ
ಶ್ಯಾಮಾಯೈ ನಮಃ
ಮಹಿಷಾಸುರ ಮರ್ದಿನ್ಯೈ ನಮಃ
ಭುಕ್ತಿಪ್ರದಾಯೈ ನಮಃ
ಭೋಗಕರ್‍ಯೈ ನಮಃ
ಭುಜಂಗಮ ವಿಭೂಷಿತಾಯೈ ನಮಃ
ಕೈವಲ್ಯದಾಯಿನ್ಯೈ ನಮಃ
ಶಾಂತಾಯೈ ನಮಃ ||೮೦||
ಶಾಶ್ವತಾಯೈ ನಮಃ
ಶಂಭುವಲ್ಲಭಾಯೈ ನಮಃ
ಆಯುಷ್ಕರ್‍ಯೈ ನಮಃ
ವರಿಷ್ಠಾಯೈ ನಮಃ
ಶರ್ಮದಾಯೈ ನಮಃ
ನಿಗಮಾಲಯಾಯೈ ನಮಃ
ಭಕ್ತಾಧೀನಾಯೈ ನಮಃ
ಭಗವತ್ಯೈ ನಮಃ
ಭಾನುಮಂಡಲಮಧ್ಯಗಾಯೈನಮಃ
ಪೃಥ್ವೀಸ್ವರೂಪಾಯೈ ನಮಃ ||೯೦||
ಪೃಥುಲಾಯೈ ನಮಃ

ಪ್ರಜಾ ಸೃಷ್ಟಿ ವಿಧಾಯಿನ್ಯೈ ನಮಃ
ವಿಶ್ವಧಾತ್ರ್ಯೈ ನಮಃ
ಅನಂತ ರೂಪಾಯೈ ನಮಃ
ಸರ್ವಾಭರಣ ಭೂಷಿತಾಯೈ ನಮಃ
ಭವಾನ್ಯೈ ನಮಃ
ಭದ್ರಕಾಳ್ಯೈ ನಮಃ
ಬ್ರಹ್ಮವಿಷ್ಣು ಶಿವಾತ್ಮಿಕಾಯೈ ನಮಃ
ಸ್ಕಂದ ಮಾತ್ರೇ ನಮಃ
ಹೈಮವತ್ಯೈ ನಮಃ ||೧೦೦||

ಮಹಾತ್ರಿಪುರಸುಂದರ್ಯೈ ನಮಃ
ವಶಿಷ್ಠಕಶ್ಯ ಪಾದೀನಾಂ ಸರ್ವ ಸಂಪತ್ಪ್ರದಾಯಿನ್ಯೈ ನಮಃ
ಕೃಪಾಶೀಲಾಯೈ ನಮಃ
ವೇದ ವೇದ್ಯಾಯೈ ನಮಃ
ವರದಾಯೈ ನಮಃ
ಸರ್ವಮಂಗಳಾಯೈ ನಮಃ
ಶುಭಾಯೈ ನಮಃ
ಮನೋನ್ಮನ್ಯೈ ನಮಃ ||೧೦೮||

ಇತಿ ಶ್ರೀ ಪಾರ್ವತೀ ದೇವ್ಯ ಷ್ಟೋತ್ತರ ಶತನಾಮಾವಲಿಃ

— ಸಂಪೂರ್ಣ —



# ಅಷ್ಟಕಗಳು



## ಅನ್ನಪೂರ್ಣಾಷ್ಟಕಂ

ನಿತ್ಯಾನಂದಕರೀ ವರಾಭಯಕರೀ ಸೌಂದರ್ಯರತ್ನಾಕರೀ
ನಿರ್ಧೂತಾಖಿಲ ಘೋರಪಾಪನಿಕರೀ ಪ್ರತ್ಯಕ್ಷಮಾಹೇಶ್ವರೀ ।
ಪ್ರಾಲೇಯಾಚಲವಂಶಪಾವನಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನ ಪೂರ್ಣೇಶ್ವರೀ ॥೧॥

ನಾನಾರತ್ನ ವಿಚಿತ್ರ ಭೂಷಣಕರೀ ಹೇಮಾಂಬರಾಡಂಬರೀ
ಮುಕ್ತಾಹಾರವಿಡಂಬಮಾನವಿಲಸದ್ವ ಕ್ಷೋಜಕುಂಭಾಂತರೀ ।
ಕಾಶ್ಮೀರಾಗರುವಾಸಿತಾ ರುಚಿಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನ ಪೂರ್ಣೇಶ್ವರೀ ॥೨॥

ಯೋಗಾನಂದಕರೀ ರಿಪುಕ್ಷಯಕರೀ ಧರ್ಮೈಕನಿಷ್ಠಾಕರೀ
ಚಂದ್ರಾರ್ಕಾನಲಭಾಸಮಾನಲಹರೀ ತ್ರೈಲೋಕ್ಯರಕ್ಷಾಕರೀ ।
ಸರ್ವೈಶ್ವರ್ಯಕರೀ ತಪಃಫಲಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನ ಪೂರ್ಣೇಶ್ವರೀ ॥೩॥

ಕೈಲಾಸಾಚಲಕಂದರಾಲಯಕರೀ ಗೌರೀ ಶಿವಾ ಶಂಕರೀ
ಕೌಮಾರೀ ನಿಗಮಾರ್ಥಗೋಚರಕರೀ ಓಂಕಾರ ಬೀಜಾಕ್ಷರೀ ।

ಮೋಕ್ಷದ್ವಾರಕವಾಟಪಾಟನಕರೀ ಕಾಶೀಪುರಾಧೀಶ್ವರೀ
ಬಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ||೪||

ದೃಶ್ಯಾದೃಶ್ಯಪದಾರ್ಥಪಾವನಕರೀ ಬ್ರಹ್ಮಾಂಡಭಾಂಡೋಧರೀ
ಲೀಲಾನಾಟಕಸೂತ್ರಖೇಲನಕರೀ ವಿಜ್ಞಾನದೀಪಾಂಕುರೀ |
ಶ್ರೀವಿಶ್ವೇಶಮನಃ ಪ್ರಸಾದನಕರೀ ಕಾಶಿಪುರಾಧೀಶ್ವರೀ
ಬಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ||೫||

ಆದಿಕ್ಷಾಂತಸಮಸ್ತವರ್ಣನಿಕರೀ ಶಂಭುಪ್ರಿಯಾ ಶಾಂಕರೀ
ಪಾದಾಂಭೋಜನತಾಮರೀ ತ್ರಿಲಹರೀ ವಿಶ್ವೇಶ್ವರೀ ಶ್ರೀಧರೀ |
ಭಕ್ತಾಭೀಷ್ಟಕರೀ ಶುಭೋದಯಕರೀ ಕಾಶೀಪುರಾಧೀಶ್ವರೀ
ಬಿಕ್ಷಾಂದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ||೬||

ಗುರ್ವೀ ಸರ್ವಜಯೇಶ್ವರೀ ಜಯಕರೀ ಮಾತಾಕೃಪಾಸಾಗರೀ
ಶ್ರೀ ವಿಶ್ವೇಶ್ವರಭೂರಿಭಾಗ್ಯಲಹರೀ ನಿತ್ಯಾನ್ನದಾನೇಶ್ವರೀ |
ಸಾಕ್ಷಾನ್ಮೋಕ್ಷಕರೀ ಸದಾಶುಭಕರೀ ಕಾಶೀಪುರಾಧೀಶ್ವರೀ
ಬಿಕ್ಷಾಂದೇಹಿ ಕೃಪಾವಲಂಬನಕರೀ ಮಾತಾನ್ನ ಪೂರ್ಣೇಶ್ವರೀ ||೭|

ಚಂದ್ರಾರ್ಕಾನಲಕೋಟಿಕೋಟಿ ಸದೃಶಾಬಾಲಾರ್ಕವರ್ಣೇಶ್ವರೀ
ಚಂದ್ರಾರ್ಕಾಗ್ನಿಸಮಾನ ಕುಂತಲಧರೀ ಚಂದ್ರಾರ್ಕಬಿಂಬಾಧರೀ |
ಮಾಲಾಪುಸ್ತಕ ಪಾವನಾವೃತಧರೀ ಕಾಶೀಪುರಾಧೀಶ್ವರೀ
ಬಿಕ್ಷಾಂ ದೇಹಿಕೃಪಾವಲಂಬನಕರೀಮಾತಾನ್ನಪೂರ್ಣೇಶ್ವರೀ ||೮||

ಅನ್ನಪೂರ್ಣೇ ಸದಾಪೂರ್ಣೇ ಶಂಕರಪ್ರಾಣವಲ್ಲಭೇ |
ಜ್ಞಾನವೈರಾಗ್ಯಸಿದ್ಧ್ಯರ್ಥಂ ಬಿಕ್ಷಾಂಮೇದೇಹಿಪಾರ್ವತಿ ||
ಮಾತಾಚ ಪಾರ್ವತೀದೇವೀ ಪಿತಾದೇವೋಮಹೇಶ್ವರಃ |
ಬಾಂಧವಾಃ ಶಿವಭಕ್ತಾಶ್ಚ ಸ್ವದೇಶೋಭುವನತ್ರಯಂ ||

— ಇತಿ ಅನ್ನಪೂರ್ಣಾಷ್ಟಕಂ ಸಂಪೂರ್ಣಂ —

# ಲಿಂಗಾಷ್ಟಕಂ

ಬ್ರಹ್ಮಮುರಾರಿ ಸುರಾರ್ಚಿತಲಿಂಗಂ ನಿರ್ಮಲಭಸಿತಸುಶೋಭಿತಲಿಂಗಂ |
ಜನ್ಮಜದುಃಖವಿನಾಶಕಲಿಂಗಂ ತತ್ಪ್ರಣಮಾಮಿ ಸದಾಶಿವಲಿಂಗಂ ||೧||

ದೇವಮುನಿಪ್ರವರಾರ್ಚಿತಲಿಂಗಂ ಕಾಮದಹಂ ಕರುಣಾಕರಲಿಂಗಂ |
ರಾವಣದರ್ಪವಿನಾಶಕಲಿಂಗಂ ತತ್ಪ್ರಣಮಾಮಿ ಸದಾಶಿವ ಲಿಂಗಂ ||೨||

ಶುದ್ಧಸುಗಂಧಸುಲೇಪಿತಲಿಂಗಂ ಬುದ್ಧಿವಿವರ್ಧನಕಾರಣಲಿಂಗಂ |
ಸಿದ್ಧಸುರಾಸುರವಂದಿತಲಿಂಗಂ ತತ್ಪ್ರಣಮಾಮಿ ಸದಾಶಿವಲಿಂಗಂ ||೩||

ದಕ್ಷಸುಯಜ್ಞವಿನಾಶಕಲಿಂಗಂ ಕನಕಮಹಾಮಣಿಭೂಷಿತಲಿಂಗಂ |
ಫಣಿಪತಿವೇಷ್ಟನಶೋಭಿತಲಿಂಗಂ ತತ್ಪ್ರಣಮಾಮಿ ಸದಾಶಿವಲಿಂಗಂ ||೪||

ಕುಂಕುಮಚಂದನ ಲೇಪಿತಲಿಂಗಂ ಪಂಕಜಹಾರಸುಶೋಭಿತಲಿಂಗಂ |
ಸಂಚಿತಪಾಪವಿನಾಶಕಲಿಂಗಂ ತತ್ಪ್ರಣಮಾಮಿ ಸದಾಶಿವಲಿಂಗಂ ||೫||

ದೇವಗಣಾವಲಿಸೇವಿತಲಿಂಗಂ ಭಾವೈರ್ಭಕ್ತಿಭಿರೇವಚ ಲಿಂಗಂ |
ದಿನಕರಕೋಟಿವಿಭಾಸುರಲಿಂಗಂ ತತ್ಪ್ರಣಮಾಮಿ ಸದಾಶಿವಲಿಂಗಂ ||೬||

ಅಷ್ಟದಲೋಪರಿವೇಷ್ಟಿತಲಿಂಗಂ ಸರ್ವಸಮುದ್ಭವಕಾರಣಲಿಂಗಂ |
ಅಷ್ಟದರಿದ್ರವಿನಾಶಕಲಿಂಗಂ ತತ್ಪ್ರಣಮಾಮಿ ಸದಾಶಿವಲಿಂಗಂ ||೭||

ಸುರಗುರುಸುರವರ ಪೂಜಿತಲಿಂಗಂ ಸುರವನ ಪುಷ್ಪಸಮರ್ಚಿತಲಿಂಗಂ |
ಪರಾತ್ಪರಂ ಪರಮಾತ್ಮಕಲಿಂಗಂ ತತ್ಪ್ರಣಮಾಮಿ ಸದಾಶಿವಲಿಂಗಂ ||೮||



# ವಚನಗಳು

ಸುರತರು ವೃಕ್ಷದೊಳಗಲ್ಲ
ಸುರಧೇನು ಪಶುವಿನೊಳಗಲ್ಲ
ಶಿಷ್ಯನ ಭಾವಕ್ಕೆ ಗುರುನರನಲ್ಲ
ಗುರುವೇ ಪರಮೇಶ್ವರನೆಂದು
ಭಾವಿಸಬಲ್ಲರೇ ಶಿಷ್ಯನೆಂಬೆನಯ್ಯಾ
ಮಹಾಲಿಂಗ ಗುರುಸಿದ್ಧೇಶ್ವರ

ಊರಿಗೆ ಆಗರವೇ ಶೃಂಗಾರ
ನೀರಿಗೆ ನೈದಿಲೆಯೇ ಶೃಂಗಾರ
ನಾರಿಗೆ ಗುಣವೇ ಶೃಂಗಾರ
ಗಗನಕ್ಕೆ ಚಂದ್ರನೇ ಶೃಂಗಾರ
ಕೂಡಲ ಸಂಗನ ಶರಣರ
ನೊಸಲಿಗೆ ವಿಭೂತಿಯೇ ಶೃಂಗಾರ

ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ
ಅಂಬುಜಕೆ ಬಾನುವಿನಾ ಉದಯದ ಚಿಂತೆ
ಭ್ರಮರಂಗೆ ಪರಿಮಳದ ಬಿಂದುಂಬ ಚಿಂತೆ
ಎನಗೆ ನಮ್ಮ ಕೂಡಲ ಸಂಗಮ ದೇವರ ಚಿಂತೆ

ಮೃದು ವಚನವೇ ಸಕಲ ತಪಂಗಳಯ್ಯಾ
ಮೃದು ವಚನವೇ ಸಕಲ ಜಪಂಗಳಯ್ಯಾ
ಸದುವಿನಯವೇ ಸದಾಶಿವನ ಒಲುಮೆಯಯ್ಯಾ
ಕೂಡಲ ಸಂಗಮ ದೇವಾ

ಹಸಿವಾದೊಡೆ ಬಿಕ್ಷಾನ್ನಗಳುಂಟು
ತೃಷೆಯಾದೊಡೆ ಕೆರೆಹಳ್ಳಭಾವಿಗಳುಂಟು

ಶಯನಕ್ಕೆ ಹಾಳು ದೇಗುಲಗಳುಂಟು
ಚನ್ನಮಲ್ಲಿಕಾರ್ಜುನಯ್ಯಾ ಆತ್ಮಸಂಗಾತಕ್ಕೆ ನೀನೆನಗುಂಟು

ಹೆಣ್ಣೆಂಬರಿ, ಗಂಡೆಂಬರಿ,
ಆತ್ಮಕ್ಕೆ
ಮಲೆ-ಮುಡಿಕೆಗಳುಂಟೆ ?
ಗಡ್ಡ-ಮೀಸೆಗಳುಂಟೇ ?

ಲಿಂಗದಲಿ ಮನವಾಗಿ ಲಿಂಗದಲಿ ನೆನಹಾಗಿ
ಲಿಂಗದಲಿ ನೋಟನುಡಿ ಕೂಟವಾದವನು
ಲಿಂಗವೇ ಅಕ್ಕು ಸರ್ವಜ್ಞ

ಸೊಡರೆಣ್ಣೆ ತೀರಿದರೆ ಕೊಡನೆತ್ತಿ ಹೊಯ್ಯುವರೇ
ಕೊಡಬೇಡ ಕೊಡದೆ ಇರಬೇಡ
ಧರ್ಮವ ಬಿಡಬೇಡ ಸರ್ವಜ್ಞ

ತನ್ನನೋಡಲಿಯೆಂದು ಕನ್ನಡಿ ಕರೆಯುವುದೇ
ತನ್ನಲ್ಲಿ ಜ್ಞಾನವುದಸಿದ ಮಹಾತ್ಮನು
ಕನ್ನಡಿಯತೆರದಂತಿಹನು ಸರ್ವಜ್ಞ

ಯೋಗಿಗೆ ಹೊಲೆಯಿಲ್ಲ ಸಾಗರಕೆ ನೆಲೆಯಿಲ್ಲ
ಯೋಗವಟ್ಟವಗ ಮಳವಿಲ್ಲ
ಜ್ಞಾನಿಗೆ ಆಗ ಹೋಗಿಲ್ಲ ಸರ್ವಜ್ಞ

ಕೋಟೆ ಕದನಕೆ ಲೇಸು ಜೇಟೆ ಅರಸಗ ಲೇಸು
ನೀಟಾದ ಹೆಣ್ಣು ತರಲೇಸು
ಸುಜನರೊಡನಾಟವೇ ಲೇಸು ಸರ್ವಜ್ಞ

## ೨೬

# ಪದಗಳು ಹಾಗೂ ಮಂಗಲ

### ವಿವಾಹ ಕಾಲದಲ್ಲಿ ಹೆಣ್ಣು-ಮಕ್ಕಳು ಹಾಡತಕ್ಕ ಶ್ರೀಗುರುವಿನ
### — ಸುವ್ವಿಪದ —

ಸುವ್ವಿ ಶ್ರೀ ರೇಣುಕನೇ ಸುವ್ವಿ ಶ್ರೀ ದಾರುಕನೇ ಸುವ್ವಿ ಶ್ರೀ ಪಂಡಿತಾರಾಧ್ಯ ಸುವ್ವಿ || ಸುವ್ವಿ ಶ್ರೀ ಪಂಡಿತಾರಾಧ್ಯೈಕೋರಾಮ ಶ್ರೀ ವಿಶ್ವಾರಾಧ್ಯ ಗುರುವರ್ಯ ಸುವ್ವಿ ||೧|| ಶಿವಧರ್ಮ ಸ್ಥಾಪನೆಗೆ ಭುವಿಗವತರಿಸಿದ | ಶಿವರೂಪ ಪಂಚಾಚಾರ್ಯರನು ಸುವ್ವಿ | ಶಿವರೂಪ ಪಂಚಾಚಾರ್ಯರನು ನುತಿಸಿನಾ | ಭವಬಾಧೆಯನ್ನು ಕಳೆಯುವೆನು ಸುವ್ವಿ ||೨|| ಶಿವಲಿಂಗ ಧಾರಣವ | ತವೆ ಮೋಕ್ಷ ಕಾರಣವೆಂ | ದವನಿಯೊಳಗದನೆ ಸ್ಥಾಪಿಸಿದ ಸುವ್ವಿ | ಅವನಿಯೊಳಗದನೆ ಸ್ಥಾಪಿಸಿದಂಥ ಗುರುಗ | ಳೈವರನೆ ಪೊಗಳಿ ಬಾಳುವೆನು ಸುವ್ವಿ ||೩|| ಗುರುಕರುಣ ಪಡೆಯದ ನರನು ದೇಹಾಂತ್ಯದೊಳು | ನರಕದೊಳು ಬಿದ್ದು ನರಳುವನು ಸುವ್ವಿ ! ನರಕದೊಳು ಬಿದ್ದು ನರಳುವನೆಂಬುದರಿಂ | ಗುರುವಿನಡಿಗಳನೆ ಪೊಂದುವುದು ಸುವ್ವಿ ||೪|| ಗುರುವಿನುಪದೇಶವನು ದೊರಕಿಸಿಕೊಂಡವನಂ | ಗುರುಪುತ್ರನೆಂದು ಪೇಳುವರು ಸುವ್ವಿ | ಗುರುಪುತ್ರನೆಂದೆನಿಸದನ್ಯರಿಂದುಪದಿಷ್ಟ ನರನುದ್ವಿರೇತನೆನಿಸುವನು ಸುವ್ವಿ ||೫|| ಗುರುವಿಂದದೊರೆತದ್ದೇ ಸರಿಯಾದ ಉಪದೇಶ | ಗುರುವಲ್ಲದವನ ಉಪದೇಶ ಸುವ್ವಿ | ಗುರುವಲ್ಲದವನ ಉಪದೇಶ ಬೂದಿಯೊಳು | ನೀರ್ಹೋಮ ಗೈದ ತೆರೆನಹುದು ಸುವ್ವಿ ||೬|| ಶ್ರುತಿಪಥವ ಮೀರುವಗೆ ಗತಿಯಿಲ್ಲದಿಂತೆಂದು | ಪ್ರಥಿತ ಶ್ರುತಿವಾಕ್ಯ ವಿರುತಿಹುದು ಸುವ್ವಿ | ಪ್ರಥಿತ ಶ್ರುತಿವಾಕ್ಯವಿರುವ ಕಾರಣದಿಂದ | ಶ್ರುತಿಪಥದಿ ಗುರುವ ನುತಿಸುವದು ಸುವ್ವಿ ||೭|| ಮರವೆ ಮಾಯೆಗಳನ್ನು ಪರಿಹರಿಸಿ ಕಾಯುವನು | ಗುರುವಲ್ಲದನ್ಯನೆಂತಹನು ಸುವ್ವಿ | ಗುರುವಲ್ಲವನ್ಯನಿಲ್ಲೆಂದು ವೇದ

ಗಳು । ಗುರುವ ಪರಿಪರಿಯಿಂ ಪೊಗಳುವವು ಸುವ್ವಿ ||೮|| ಗುರುಮೂರ್ತಿ ಧ್ಯಾನಕ್ಕೆ ಗುರುಪದವು ಅರ್ಚನೆಗೆ । ಗುರುವಾಕ್ಯ ಮಂತ್ರವೆನಿಸಿಹುದು ಸುವ್ವಿ। ಗುರುವಾಕ್ಯ ಮಂತ್ರವಾದಂತೆ ಗುರು ಕೃಪೆಯೇ ಮುಕ್ತಿಗೆ ಮೂಲ ವೆನಿಸಿಹುದು ಸುವ್ವಿ ||೯|| ನಗುರೋರಧಿಕವೆಂದು ಪೊಗಳುವ ಶೃತಿಮತವ। ಬಗೆಯದ ನರನು ಪಾಪಿಯು ಸುವ್ವಿ। ಬಗೆಯದನರನು ಪಾಪಿಯೆನಿಸುವ ನೆಂದು ನಿಗಮಾಗಮಂಗಳೊರೆಯುವವು ಸುವ್ವಿ ||೧೦|| ಶಿವದೀಕ್ಷೆಯಿಂ ಪೂರ್ವ ಭವವನ್ನು ಕಳೆಯುತ ಶಿವಕಲೆಯ ತೋರಿ ಬದುಕಿಸಿದ ಸುವ್ವಿ। ಶಿವಕಲೆಯ ತೋರಿ ಬದುಕಿಸಿದ ಶ್ರೀಗುರುವ। ನನವರತ ಪಾಡಿಸುಖಿವುದು ಸುವ್ವಿ ||೧೧|| ತ್ರಿವಿಧದೀಕ್ಷೆಗಳಿಂದ ತ್ರಿವಿಧದೇಹಗಳೊಳಿಹ। ತ್ರಿವಿಧ ಮಲಗಳನು ಪರಿಹರಿ ಸಿಸುವ್ವಿ। ತ್ರಿವಿಧ ಮಲಗಳನು ಪರಿಹರಿಸಿ ಗುರುವರ್ಯ ತ್ರಿವಿಧ ಲಿಂಗಗಳ ಸ್ಥಾಪಿಸಿದ ಸುವ್ವಿ ||೧೨|| ಇಂಥ ಗುರುವಿನ ಪದ। ಚಿಂತಿಸದೆ ಸಂತತ ಭ್ರಾಂತಿಯಿಂ ಜನ್ಮನೀಗುವದು ಸುವ್ವಿ। ಭ್ರಾಂತಿಯಿಂ ಜನ್ಮನೀಗುವದು ಹಿತ ವಲ್ಲ. ಕಂತುಹರನವಗೆ ಕುರುಣಿಸನು ಸುವ್ವಿ ||೧೩|| ಗುರುವಿನ ಮರ್ಮವ ನರಿಯದೆ ಮನಬಂದ। ತೆರದಿ ನಡೆವವಗೆ ನರಕವು ಸುವ್ವಿ। ತೆರದಿನಡೆವ ವಗೆ ನರಕವೆಂದಾಗಮದಿ। ಹರನೊರೆದವಚನವಿರುತಿಹುದು ಸುವ್ವಿ ||೧೪|| ಗುರುವೇ ಶ್ರೀಪರಶಿವನು ಪರಶಿವನೇ ಶ್ರೀಗುರುವು । ಹರಗುರುಗಳಿಗಭೇ ಧವು ಸುವ್ವಿ। ಹರಗುರುಗಳಿಗೆ ಬೇಧವಿನಿತಿಲ್ಲೆಂದು। ಪರಮ ಶೃತಿವಾಕ್ಯ ವಿರುತಿಹುದು ಸುವ್ವಿ ||೧೫|| ಗುರುವೇ ತಾ ಸ್ವಯಂಚರಪರನಾಗಿ ಭಕ್ತರ್ಗೆ। ದೊರೆಯಾಗಿ ಜಗದಿ ಮೆರೆಯುವನು ಸುವ್ವಿ। ದೊರೆಯಾಗಿ ಜಗದಿ ಮೆರೆವ ಶಿವಯೋಗೀಂದ್ರ। ಗುರುವರನೆ ಸುಖಕೆ ಕಾರಣನು ಸುವ್ವಿ ||೧೬|| ಜಂಗ ಮಕ್ಕೊಡೆಯ ಗುರುಲಿಂಗದ ತತ್ವವ। ಮಂಗಲ ಮನದಿ ತಿಳಿಯುತ ಸುವ್ವಿ। ಮಂಗಲಮನದಿ ತಿಳಿಯುತ ನಡೆವವಗೆ ಮಂಗಲಪದವಿ ಕರಗತವು ಸುವ್ವಿ ||೧೭|| ಸರ್ವಪ್ರಾಯಶ್ಚಿತ್ತ ವಿಧಿನಿಷೇಧಂಗಳು। ಕಾರ್ಯಾಕಾರ್ಯಗಳು ವೈಕಲ್ಯ ಸುವ್ವಿ। ಕಾರ್ಯಾಕಾರ್ಯಗಳು ವೈಕಲ್ಯಗಳಿಗೆಲ್ಲ। ಆರ್ಯ ಶ್ರೀ ಗುರುವೇ ಕಾರಣನು ಸುವ್ವಿ ||೧೮|| ಪಿತೃಮಾತೃಭ್ರಾತೃಕ। ಕ್ಷತ್ರ

ದಾಸೀದಾಸ | ಪುತ್ರಾದಿಗಳಿಗೆ ಗುರುವೊಬ್ಬ ಸುವ್ವಿ | ಪುತ್ರಾದಿಗಳಿಗೆ ಗುರುವೊಬ್ಬನಿಹನೆಂದು | ಕರ್ತೃ ಹರಬೋಧವಿರುತಿಹುದು ಸುವ್ವಿ ||೧೯|| ಶ್ರೀ ಪಂಚಾಚಾರ್ಯರೇ ವೀರಶೈವರಿಗೆಲ್ಲ | ಓಪರವರನ್ನೇ ಸೇವಿಸುದು ಸುವ್ವಿ | ಓಪರವರನ್ನೇ ಸೇವಿಸಿ ಭಕ್ತಿಯಿಂ | ತಾಪತ್ರಯಗಳ ಕಳೆಯುವದು ಸುವ್ವಿ ||೨೦|| ಒರೆದಚತುರಾಶ್ರಮಿಗಳ್ಪರ ಪಂಚಾಚಾರ್ಯರ | ಪರಿಪರಿಯಿಂದ ಸ್ತುತಿಸುತ್ತ ಸುವ್ವಿ | ಪರಿಪರಿಯಿಂದ ಸ್ತುತಿಸುತ್ತಲಿಹಪರದ | ಪರಿಪರಿಸುಖವ ಪಡೆಯುವರು ಸುವ್ವಿ ||೨೧|| ವೇದವಂದಿತರಾದ | ಆದಿಗುರುಗಳಭಕ್ತಿ ಮೇದಿನಿಗೆ ಶುಭವ ಕೊಡುತಿಹುದು ಸುವ್ವಿ | ಮೇದಿನಿಗೆ ಶುಭವಕೊಡುತಿಹುದು ಮೋಕ್ಷದ | ಹಾದಿಯಾಗಿಹುದು ಸತ್ಯವು ಸುವ್ವಿ ||೨೨|| ಗುರುವಿನ ಗುರುಗಳು ಪರಮ ಶ್ರೀ ಗುರುಗಳು | ಧರೆಯೊಳು ಪಂಚಾಚಾರ್ಯರೇ ಸುವ್ವಿ | ಧರೆಯೊಳು ಪಂಚಾಚಾರ್ಯರ ಭಜಿಸರೆ | ಪರಿಕಿಸೆ ಜೀವನ್ಮುಕ್ತರು ಸುವ್ವಿ ||೨೩|| ಭೃತ್ಯವೃಷಲಿಂಗಾಭಿ | ನುತ್ಯ ಪಂಚಾಚಾರ್ಯ | ಸತ್ಯಗುರುಗಳನು ಭಜಿಪರಿಗೆ ಸುವ್ವಿ | ಸತ್ಯ ಗುರುಗಳನು ಭಜಿಪರಿಗೆ ನಿತ್ಯದಿ ಭುಕ್ತಿ ಮುಕ್ತಿಗಳು ಸಿದ್ಧಿಪವು ಸುವ್ವಿ ||೨೪||

ವೃಷಭಲಿಂಗ ಕವಿಕೃತ

ಲಾಲೀಲಾಲೀಯುಪರ ಬ್ರಹ್ಮದಶಿಶುವೆ | ಮಾಲೆಯ ಧರಿಸುವೆ ಮಲ್ಲಿಗೆ ಹೂವಿನ ||ಪಲ್ಲವಿ|| ಅಷ್ಟದಳದ ಕಮಲ ತೊಟ್ಟಿಲೊಳಗೆ ಮಲಗಿ | ಶ್ರೇಷ್ಠ ಸದ್ಗುಣ ಹಸ್ತಪದಗಳನಾಡುತ | ನೆಟ್ಟನೆನಿಟಿಲಾಭ್ರೂಮಧ್ಯದಜ್ಯೋತಿಯ | ದೃಷ್ಟಿಸಿನೋಡುತ ಕುಟುಕಲು ನಗುತಿಹ ||೧|| ಪ್ರಣವಘೋಷದ ನಾಗಸ್ವರ ವೇಣಿವಾಸುಕಿ | ಝುಣಝುಣಂಘಲ್ಗೆಜ್ಜೆ ತಾಳಮೃದಂಗಭೇರಿ | ಘಣಘಣಂಬುವ | ಘಂಟಿಜಾಗುಟನಾದವ | ಬಣ್ಣಿಸಲಿವಶಿವಸುಖಮಯ ಕಂದನೆ ||೨|| ಫಲಪದಗಳಮೀರಿಶಿವಪದವೆಂಬುವ | ಹೊಳೆವಮೇಲುಪ್ಪರಿಗೆ ಮೇಲೆಕುಳಿತು ಮಾಯಾ | ಕಲಿಯುಗನರ್ತಕಿಯಾಟವನೋಡುತ | ನಲಿವಪರಶಿವಮಹಂತಲಿಂಗ ಶ್ರೀ ಬಾಲಕ ||೩||

ಹೆರಗುರು ದಯತಪ್ಪಿದಮೇಲ್ಯಾರಿಗ್ಯಾರಿಲ್ಲವು | ಬಾರದಬಂಧನಗಳು ಬರುತಿಹವು ||ಪಲ್ಲವಿ|| ಹರಿಬ್ರಹ್ಮಾದಿಗಳಿಗೆ ಬರಹತಪ್ಪದು ಹಣೆಯ | ಧರೆಯ ನರಮನುಜರಪಾಡೇನು | ಧರೆಯ ನರಮನುಜರಪಾಡೇನು | ಕರಕಷ್ಟಗಳು ಸುರಲೋಕಕ್ಕೈದಿದರುತಪ್ಪವು ||೧|| ಪರಿಪರಿಪುಣ್ಯಗಳಿಂದೆ ಪರಿಪರಿ ಸುಖ ತಟ್ಟುವವು | ಪರಿಪರಿಪಾಪಗಳಿಂದೆ ಪರಿಪರಿ | ಪರಿಪರಿಯಪಾಪಗಳಿಂದೆ ಪರಿಪರಿಯದುಃಖಗಳು | ಮರೆವೆಯಾತ್ಮನಿಗೆ ಮುಸುಕುವವು ||೨|| ಚಿಂತೆಬಡತನ ಬೇನೆಸಂತಾಪಂಗಳಿಗಂಜಿಮ | ಹಂತಲಿಂಗನಮರೆದುಕೆಡದಿರೆ | ಮಹಂತಲಿಂಗನಮರೆದು ಕೆಡದಿರೆಗತಿಯೊಂದಿಲ್ಲ | ಕಂತುಹರ ಧೈರ್ಯವ ಬಿಡದಿರಿ ||೩||

ಜೋ ಜೋ ರುದ್ರಮುನೀಂದ್ರ | ಜೋ ಜೋ ಚಿದ್ರಸಸಾಂದ್ರ | ಜೋ ಜೋ ಭದ್ರಗಣೇಂದ್ರ ಸುಖಶರನಿಧಿಚಂದ್ರ ||೧|| ರೇವಣ ಸಿದ್ಧಕುಮಾರ | ಭಾವಜ ಸಂಹರಧೀರ | ಪಾವನ ದಿವ್ಯಶರೀರ | ಶಿವಸಮಯೋದ್ಧಾರ ||೨|| ಬಂಧುರ ಕಾಂಚಿಯೊಳುದಿಸಿ ಸುಂದರರೂಪವ ಧರಿಸಿ | ಬಂದನು ಸದ್ಗುರುವೆನಿಸಿ | ಮೋಹನರಸಸರಿಸಿ ||೩|| ಈತನು ಸದ್ಗುಣಿಯೆಂದು | ಈತನು ಚಿನ್ಮಣಿಯೆಂದು | ಈತನು ಪರಶಿವನೆಂದು | ತಿಳಿದರು ನರರಂದು ||೪|| ಇಂತು ಪಾಡಿದರಾಗ | ಶಾಂತರೂಪನು ಭೋಗ | ಸಂತತಿಯಿತ್ತನು ಯೋಗ | ತತಿ ಕುಶಲನುಬೇಗ ||೫||

## ಭಾವಬ್ರಹ್ಮ

ಭಾವವೇ ಬ್ರಹ್ಮಕಾಣೆಲೋ
ಭಾವವಿರದಿರೆ ಜಗವೆ ಶೂನ್ಯ
ಭಾವಿಸೊಡೆ ನರರೂಪು ಗುರುವು ತಾನಾಗುವುದು
ಭಾವವಿರದಿರೆ ಗುರುವೆ ನರನಾಗಿ ಕಾಂಬುವನು
ಭಾವಿಸೊಡೆ ಗುರುಪಾದದುದಕ ಪಾವನ ತೀರ್ಥ
ಭಾವವಿಲ್ಲದ ತೀರ್ಥ ಮಡುವಿನಗ್ಗಣಿಯು
ಭಾವಿ ಸೊಡೆ ಶಿವಲಿಂಗ-ಭೂತಿ-ರುದ್ರಾಕ್ಷಿಗಳು

ಭಾವವಿರದಿರೆಕಲ್ಲು–ಬೂದಿ–ಕಾಳುಗಳು
ಭಾವಮಿರೆ ಸತಿ-ಪತಿ-ಸಹೋದರ-ಸಹೋದರಿಯರು
ಭಾವವಿರದಿರೆ ಹೆಣ್ಣು-ಗಂಡು-ರಕ್ಕಸರು

ವರಕವಿ ವಾಗೀಶ ಈಗಿನ ಶ್ರೀಶೈಲ ಜಗದ್ಗುರುಗಳು)
(ಧರ್ಮರಾಜ್ಯ)

## — ಮಂಗಲ —

ಶ್ರೀ ವಿಶ್ವಾರಾಧ್ಯಾಯ ಮಂಗಲಂ| ಶಿವವಿಶ್ವೈಕ ಪಾಲಾಯ ಮಂಗಲಂ| ವಿಶ್ವೇಶಜಾತಾಯ | ವಿಶ್ವಾದಿ ಬೀಜಾಯ | ಶ್ರೀ ವಿಶ್ವವಂದ್ಯಾಯ ಮಂಗಲಂ ||ಪಲ್ಲ|| ಚರವೃಂದ ವಂದ್ಯಾಯ ಮಂಗಲಂ | ವರಚರನೀತಿ ಬೋಧಾಯ ಮಂಗಲಂ| ಗುರುರೂಪಧರಾಯ | ಗುರುರಾಜಿ ರಾಜಾಯ | ಪರಿಪೂತ ದೇಹಾಯ ಮಂಗಲಂ ||೧|| ಭವಮೂಲ ಭಂಗಾಯ ಮಂಗಲಂ| ಶಿವಶಿವ ಲಿಂಗಸಂಗಾಯ ಮಂಗಲಂ | ಭವಮಂಗಲಾಂಗಾಯ | ಶಿವಪಿಂಗಜೂಟಾಯ ಕವಿತುಂಗ ಸೇವ್ಯಾಯ ಮಂಗಲಂ ||೨|| ಕಾಶೀಪುರೇಶಾಯ ಮಂಗಲಂ | ಕವಿಕಾಶೀನಾಥೇಶಾಯ ಮಂಗಲಂ | ಕ್ಲೇಶಾಪಹಾರಾಯ | ಪಾಶಪ್ರಮೋಚಾಯ | ಶ್ರೀಶಾದಿ ಮಾನ್ಯಾಯ ಮಂಗಲಂ ||೩||

ಸರ್ವಮಂಗಳೆಯು ಸರ್ವರಿಗೂ ಸರ್ವದಾ ಸರ್ವಮಂಗಳಗಳನ್ನುಂಟು ಮಾಡಲಿ.

ಪರಿಸಮಾಪ್ತಃ

---

ಸೂಚನೆ— ಈ ಪುಸ್ತಕದಲ್ಲಿ ಅಲ್ಲಲ್ಲಿ ಅಚ್ಚುದೋಷಗಳು ಕಂಡು ಬಂದಲ್ಲಿ ಓದುಗರು ಅವುಗಳನ್ನು ಸರಿಪಡಿಸಿ ಓದಬೇಕಾಗಿ ಬೇಡಿರುವೆ. ಸದರ ಪುಸ್ತಕವು ನಿಮಗೆ ಮುಟ್ಟಿದ ಕೂಡಲೇ ಟಪಾಲು ಬರೆದು ತಿಳಿಸಬೇಕಾಗಿ ವಿನಂತಿ. ಮತ್ತು ಈ ಗ್ರಂಥಕ್ಕೆ ವಾಗ್ದಾನ ಮಾಡಿದವರು ಸದರ ಪುಸ್ತಕವು ತಮಗೆ ತಲ್ಪಿದ ಕೂಡಲೇ ತಮ್ಮ ಸಹಾಯ ಧನವನ್ನು ಕೊಟ್ಟು ಗುರುಕೃಪೆಗೆ ಪಾತ್ರರಾಗಬೇಕೆಂದು ಕೋರುವೆ.

ಶ್ರೀ ಪಟ್ಟದಸ್ವಾಮಿಗಳು ಹಿರೇಮಠ, ಕೊಣ್ಣೂರ

# ಸ್ತ್ರೀ-ಧರ್ಮ

## ಈ ಗ್ರಂಥಕ್ಕೆ ಧನಸಹಾಯ ಮಾಡಿದ ಮಹನೀಯರ
## — ಹೆಸರುಗಳು —

### ೨೫ ರೂ. ದಾತೃಗಳು

ಶ್ರೀಮತಿ. ಸಾವಂತ್ರೆವ್ವಾ ವೀರಬಸಯ್ಯಾಸ್ವಾಮಿ ಅಂಗಡಿ ಹಿರೇಮಠ ಜಕನೂರು
ಕುಂ. ಸೌ. ಅನ್ನಪೂರ್ಣಾ ಕಲ್ಲಪ್ಪ ಜಡಮಳಿ ಹೊಳೆ-ಆಲೂರ
ಶ್ರೀಮಾನ್. ಎಸ್. ಬಿ. ಗುಂಡಳ್ಳಿ ನಂದವಾಡಿಗಿ
” ತಮ್ಮಂಣೆಪ್ಪ ಫಕೀರಪ್ಪ ಕಂಠಿ ನರಗುಂದ.
” ಗುರುಲಿಂಗಪ್ಪ ಫಕೀರಪ್ಪ ಕಂಠಿ ”

### ೨೧ ರೂ. ದಾತೃಗಳು

ಶ್ರೀ. ಶರಣಮ್ಮನವರು ಕಂಬಳಿಹಾಳ ಸಜ್ಜಲಗುಡ್ಡ

### ೧೫ ರೂ. ದಾತೃಗಳು

ಕುಂ. ಸೌ. ವೀರವ್ವಾ ಶಿವರುದ್ರಪ್ಪ ಕುಪ್ಪಸ್ತ ಬಾಗಲಕೋಟ
” ನಾಗವ್ವಾ ಬಸೆಟ್ಟೆಪ್ಪ ಹಲಕುರ್ಕಿ ”

### ೧೦ ರೂ. ದಾತೃಗಳು

ವೇ. ಶ್ರೀ. ಮಹಾಂತಯ್ಯನವರು ಮುದೇನೂರಮಠ ನಂದವಾಡಿಗಿ
ಶ್ರೀಮಾನ್ ಯಜಮಾನ ನಾಗರಾಳ ದೊಡ್ಡಪ್ಪನವರು ಹುನಗುಂದ
ಕುಂ. ಸೌ. ನೀಲವ್ವಾ ಸಿ. ಸೊಬರದ ರಾಮದುರ್ಗ
ಶ್ರೀಮತಿ. ಷಣ್ಮುಖವ್ವಾ ದಂಡಿನ ನೀರಲಗಿ(ವಾಗ್ದಾನ)
” ಗಂಗವ್ವಾ ಶಿವರುದ್ರಪ್ಪ ಬ್ಯಾಹಟ್ಟಿ ನರಗುಂದ
” ವೀರಮ್ಮಾ ಭದ್ರಗೌಡ ಪಾಟೀಲ ಜಕನೂರ (ವಾಗ್ದಾನ)
” ಪಾರ್ವತೆವ್ವಾ ಪಾಟೀಲ ಕೊಂಣೂರ ”

## ೫ ರೂ. ದಾತೃಗಳು

ಶ್ರೀ. ಮ. ನಿ. ರಾಜೋಟೆಸ್ವಾಮಿ ಗುರುಚನ್ನಬಸವಸ್ವಾಮಿಗಳು
ಚಂದ್ರಶೇಖರಮಠ ಮುನವಳ್ಳಿ
ವೇ. ಶ್ರೀ. ಬಸಯ್ಯಾ ಶಿವಸಂಗಯ್ಯಾ ಸೊಪ್ಪಿಮಠ ಬ್ಯಾಡಿಗಿ
" ರುದ್ರಯ್ಯಾ ಮರಿಸ್ವಾಮಯ್ಯಾ ಹಿರೇಮಠ ನೀರಲಗಿ(ವಾಗ್ದಾನ)
" ಮಹಾಲಿಂಗಯ್ಯಾ ಶಿವಯ್ಯಾ ಹಿರೇಮಠ ಹಿರೇಮೂಲಂಗಿ
* ಸಿದ್ಧರಾಮಯ್ಯಸ್ವಾಮಿ ಗಂಗಾಧರಮಠ ಮುದಗಲ್ಲ
" ಬಸಯ್ಯಾ ಪಂಚಾಕ್ಷರಯ್ಯಾ ವಿರಕ್ತಮಠ ಚಿಕ್ಕನರಗುಂದ.
(ವಾಗ್ದಾನ)
" ಗೂಳಪ್ಪ ಲಿಂಗಪ್ಪ ಹೂಗಾರ ಹೊಳೆ-ಆಲೂರ
ಶ್ರೀಮಾನ್ ಬಸವಂಣೆಪ್ಪ ಫಕೀರಪ್ಪ ಗಾಣಿಗೇರ "
" ವೀರಪ್ಪ ಗುರುಬಸಪ್ಪ ಸಜ್ಜನಶೆಟ್ರ "
" ವೀರಭದ್ರಪ್ಪ ಮಲ್ಲೇಶಪ್ಪ ಯಾವಗಲ್ಲ "
" ಸೋಮಪ್ಪ ಬಸಪ್ಪ ಸಜ್ಜನರ "
" ಯಚ್ಚರಪ್ಪ ಶಿದ್ದಪ್ಪ ಯಾದವಾಡ "
" ಶಂಕರಪ್ಪ ಸಂಗಪ್ಪ ಶೆಲ್ಲಿಕೇರಿ "
" ಬಸಪ್ಪ ಬಸಪ್ಪ ಬ್ಯಾಡಿಗಿ "
" ಕಲ್ಲಪ್ಪ ಗುರುಶಿದ್ದಪ್ಪ ಶಿಂಪಿ ದೇವಣಗಾಂವ
" ವಿ. ವಿ. ಬಳಿಗಾರ ಗರಗ
" ಸಂಗಪ್ಪ ಬಸಪ್ಪ ಸೂಡಿ ಕೋಣ
" ದರಿಯಪ್ಪ ಹಾದಿಮನಿ ಚಿಕ್ಕನರಗುಂದ
" ಚನಬಸಪ್ಪ ಅಯ್ಯಪ್ಪ ಹೆಬ್ಬಾಳ "
" ರಾಯಪ್ಪ ಭೀಮಪ್ಪ ತಿಮರಡ್ಡಿಯವರ "
" ಬಸಪ್ಪ ಫಕೀರಪ್ಪ ಲಕ್ಕಮ್ಮನವರ ನೀರಲಗಿ
" ಶಿಖರಪ್ಪ ಮಲ್ಲಪ್ಪ ಬಟಕುರ್ಕಿ ಮುದಕವಿ

ಶ್ರೀಮಾನ್ ಚನ್ನಪ್ಪಗೌಡ ಬಸನಗೌಡ ಪಾಟೀಲ ಚಿನಾಳ
" ಲಿಂಗನಗೌಡ ಚನ್ನಪ್ಪಗೌಡ ಪಾಟೀಲ ಮಾಸ್ತರ
ಕಲಹಾಳ (ವಾಗ್ದಾನ)
ಕುಂ. ಸೌ. ಅಂದವ್ವಾ ಅಡವಯ್ಯಾ ಕಲ್ಮಠ ಆಸೂಟಿ "
" ಗುರುಸಿದ್ದವ್ವಾ ರೇವಣಸಿದ್ದಯ್ಯಾ ಬಿಕ್ಷಾವೃತ್ತಿ ಹಿರೇಮಠ
ಹೊಳೆ-ಆಲೂರ (ವಾಗ್ದಾನ)
" ಬಸವ್ವಾ ಲಿಂ. ಕುಲಕರ್ಣಿ ಚಿಕ್ಕನರಗುಂದ.
" ಯಲ್ಲವ್ವಾ ಹನಮಂತಗೌಡ ಹಿರೇಗೌಡ್ರ ನೀರಲಗಿ
" ಹುಚ್ಚವ್ವಾ ಮೆಣಶಿಗಿ ಹೊಳೆ ಆಲೂರ
" ಕಾಶೀಬಾಯಿ ಸಿದ್ರಾಮಪ್ಪ ಕನ್ನೂರ
" ತಂಗೆವ್ವಾ ಗುರಪ್ಪ ದಂಡಿನ ನರಗುಂದ.
" ಚನ್ನವ್ವಾ ಗುರುಲಿಂಗಪ್ಪ ಕಂಠಿ "
" ಪತ್ರೆವ್ವಾ ತಮ್ಮಣ್ಣೆಪ್ಪ ಕಂಠಿ "
" ಸರಸ್ವತೆವ್ವಾ ರುದ್ರಪ್ಪ ಗಡಾದ "
" ಗುರುಸಿದ್ದವ್ವಾ ಸಿದ್ದಪ್ಪಾ ಹೆಗಡಾಳ "
" ಸಂಗವ್ವಾ ವೀರಭದ್ರಪ್ಪ ಅಥಣಿ ಬಾಗಲಕೋಟೆ
ಶ್ರೀಮತಿ. ಗಂಗವ್ವಾ ಗಂಗಾಧರಪ್ಪ ಬ್ಯಾಹಟ್ಟಿ ನರಗುಂದ.
" ನಿಂಗವ್ವಾ ಕರಬಸಪ್ಪ ನಾಗತಾಣ "
" ಮುರಿಗೆವ್ವಾ ಚನ್ನಪ್ಪ ನಾಗತಾಣ "
" ಗುರುಸಿದ್ದಮ್ಮಾ ಅರಳೀಕಟ್ಟಿಮಠ ಮಂಣೂರ ಹೊಳೆ-ಆಲೂರ
" ಪಾರ್ವತೆವ್ವಾ ಪಾಟೀಲ ಸಣ್ಣಮನಿ ಆಸೂಟಿ
" ಶಿಂಗವ್ವಾ ಶಿದ್ಲಿಂಗಪ್ಪ ಮಾನ್ವಿ ಹುಬ್ಬಳ್ಳಿ.
" ಗಂಗವ್ವಾ ವೀರಪ್ಪ ಕಮಡೊಳ್ಳಿ "
" ಶಿವವ್ವಾ ಗಾಣಿಗೇರ ಹೊಳೆ-ಆಲೂರ
" ಕಾಳೆವ್ವಾ ಬಸಪ್ಪ ಚಿಕ್ಕನರಗುಂದ. (ವಾಗ್ದಾನ)

# ಪ್ರಸಿದ್ಧ ಪತ್ರಿಕೆ

ಪೂಜ್ಯ ಸ್ವಾಮಿಗಳೇ, ಮಾನ್ಯ ಮಹಾಶಯರೇ ಮತ್ತು ಮಹಿಳೆಯರೇ,

ಅನ್ನದಾನಂ ಮಹಾದಾನಂ ವಿದ್ಯಾದಾನಂ ತತೋಧಿಕಂ |
ಅನ್ನೇನಕ್ಷಣಿಕಾ ತೃಪ್ತಿಃ ಯಾವಜ್ಜೀವಂತು ವಿದ್ಯಯಾ ||

ಎಂಬ ವಚನದಂತೆ ಎಲ್ಲಾ ದಾನಗಳಿಗಿಂತಲೂ ಅನ್ನದಾನವು ಶ್ರೇಷ್ಠವು. ಏತಕ್ಕೆಂದರೆ ಒಬ್ಬರಿಗೆ ಭೋಜನವನ್ನು ಮಾಡಿಸಿದರೆ ತೃಪ್ತಿಯಾಗುತ್ತದೆ. ಅದಕ್ಕೆ ಬದಲಾಗಿ ಧನವನ್ನಾಗಲಿ, ಅಥವಾ ಇನ್ನೇನನ್ನಾಗಲಿ ದಾನಮಾಡಿದರೆ ತೃಪ್ತಿಯಾಗದೆ ಇನ್ನೂ ಹೆಚ್ಚಾಗಿ ಕೊಡಬೇಕಾಗಿತ್ತೆಂದು ಆಶಿಸುತ್ತಾನೆ. ಆದರೆ ಅನ್ನದಾನಕ್ಕಿಂತಲೂ ವಿದ್ಯಾ (ಲೌಕಿಕ ವಿದ್ಯಾ) ದಾನವು ಶ್ರೇಷ್ಠವು. ಏತಕ್ಕೆಂದರೆ ಅನ್ನದಾನದಿಂದ ಆ ಕ್ಷಣ ಮಾತ್ರ ತೃಪ್ತಿಯಾಗುತ್ತದೆ. ಲೌಕಿಕ ವಿದ್ಯಾದಾನವನ್ನು ಮಾಡಿದರೆ ದಾನವನ್ನು ಹೊಂದಿದವನು ತನ್ನ ಜನ್ಮಾವಧಿ ವಿದ್ಯೆಯಿಂದ ಜೀವನವನ್ನು ಮಾಡಿಕೊಂಡು ಸುಖವಾಗಿರುತ್ತಾನೆ. ಲೌಕಿಕ ವಿದ್ಯಾದಾನಕ್ಕಿಂತಲೂ ಶಾಸ್ತ್ರ ವಿದ್ಯಾದಾನವು ಶ್ರೇಷ್ಠವು. ಏತಕ್ಕೆಂದರೆ, ಲೌಕಿಕ ವಿದ್ಯೆಯಿಂದ ಒಬ್ಬನು ತನ್ನನ್ನು ಈ ಜನ್ಮದಲ್ಲಿ ಮಾತ್ರ ಸಾಕಿಕೊಳ್ಳಬಹುದಲ್ಲದೆ ತನ್ನನ್ನು ಯಾವ ದುಃಖದಿಂದಲೂ ಬಿಡುಗಡೆ ಮಾಡಿಕೊಳ್ಳಲು ಸಾಧ್ಯವಿಲ್ಲ. ಶಾಸ್ತ್ರವಿದ್ಯೆಯಿಂದ ತಾನು ಸರ್ವ ದುಃಖಗಳಿಂದಲೂ ಬಿಡುಗಡೆಯಾಗಿ ಪರಮಾನಂದವನ್ನು ಹೊಂದಬಹುದು. ಆದುದರಿಂದ ಶಾಸ್ತ್ರವಿದ್ಯಾ ದಾನಕ್ಕೆ ಸಹಾಯ ಮಾಡುವವರು ಮತ್ತು ಇಂಥ ಗ್ರಂಥಗಳ ಮುದ್ರಣಕ್ಕೆ ಸಹಾಯ ಮಾಡುವವರು ಅತ್ಯಂತ ಉತ್ಕೃಷ್ಟವಾದ ಪುಣ್ಯಕ್ಕೆ ಭಾಗಿಗಳಾಗುತ್ತಾರೆ ಮತ್ತು ವಿಶೇಷ ಧನ ಸಹಾಯವಿಲ್ಲದೆ ಇಂಥ ಮಹತ್ವವುಳ್ಳ ಗ್ರಂಥಗಳು ಬೆಳಕಿಗೆ ಬರಲು ಶಕ್ಯವಿಲ್ಲ. ಈ ಪರಿಸ್ಥಿತಿಯಲ್ಲಿ ಸಮಾಜದಲ್ಲಿರುವ ಉದಾರಿಗಳೂ ಧರ್ಮಾತ್ಮರೂ ಆದ ಶ್ರೀಮಂತರು ಇಂಥ ಶ್ರೇಷ್ಠ ಪ್ರಯತ್ನಗಳಿಗೆ ಸಹಾಯ ಮಾಡುವುದು ಅತ್ಯಾವಶ್ಯಕವಾಗಿದೆ. ಆದ ಕಾರಣ ಪ್ರತಿಯೊಬ್ಬ ಸ್ತ್ರೀ-ಪುರುಷರೂ ಇಂಥ ಸತ್ಪಾತ್ರಕ್ಕೆ ತಮ್ಮ ಶಕ್ತ್ಯಾನುಸಾರ ಧನಸಹಾಯ ಮಾಡಿ ಇಹದಲ್ಲಿ ಕೀರ್ತಿಯನ್ನೂ ಪರದಲ್ಲಿ ಸದ್ಗತಿಯನ್ನೂ ಹೊಂದಬೇಕೆಂದು ಹಾರೈಸುತ್ತೇವೆ.